ಶ್ರೀರಂಗ-ನಾಟಕ್ಕೃತ

# ಸ್ವಪ್ನನಸ್ವಾರ್ಥ

ಶ್ರೀರಂಗ

ರಂಗ ಸಂಗ ಪ್ರಕಾಶನ
ಧಾರವಾಡ

ಬೆಲೆ ೧ ರೂಪಾಯಿ

ಶ್ರೀರಂಗ--ಸಾರಸ್ವತ

೨

# ಸ್ವಲ್ಪದ್ರಲ್ಲಿ ಸ್ವಾರಸ್ಯ

( ಹರಟೆಗಳು )

ಶ್ರೀರಂಗ

ರಂಗ ಮಂಗ ಪ್ರಕಾಶನ
ಧಾರವಾಡ

ಬೆಲೆ ೧ ರೂಪಾಯಿ

ಮುದ್ರಕರು
ಎನ್. ಎಸ್. ಬೆಂಗೇರಿ
ವಿಜಯ ಮುದ್ರಾಲಯ
ಧಾರವಾಡ

ಪ್ರಕಾಶಕರು
ಎಚ್. ಎಸ್. ಪಾಟೀಲ
ರಂಗಮಂಗ ಪ್ರಕಾಶನ
ಧಾರವಾಡ



ಅಕ್ಟೋಬರ
೧೯೪೪

---



---

# ಅರಿಕೆ

ಇದು 'ಶ್ರೀರಂಗನಾದಸ್ವತ' ದಲ್ಲಿ ಎರಡನೆಯ ಪ್ರಕಟನೆ. ಕನ್ನಡದಲ್ಲಿ ಅನೇಕ ವಾಚಕರನ್ನು ನಗೆಯಲ್ಲಿ ಮುಳುಗಿಸಿದಂತಹ ಮತ್ತು ಮಹತ್ತ್ವದ ವಿಷಯಗಳ ಬಗ್ಗೆ ವಿಚಾರಪ್ರಚೋದಕವಾದಂತಹ ಹರಟೆಗಳ ಸಂಗ್ರಹವಿದು ಜೊತೆಗೆ ಈ ಸಂಗ್ರಹಕ್ಕಾಗಿಯೆ ಹೊಸತಾಗಿ ಬರೆದ ಉಪಯುಕ್ತವಾದ ಮುನ್ನುಡಿಯೊಂದಿದೆ. ಈ 'ನಾಲ್ಕಾರು ಮಾತುಗಳು' ಇಂದಿನ ಕನ್ನಡ ಸಾಹಿತ್ಯದ ಅಭ್ಯಾಸಿಗಳಿಗೆ ವಿಶೇಷವಾಗಿ ಉಪಯುಕ್ತವಾದುವು ಎಂದು ಬೇರೆ ಹೇಳಬೇಕಾಗಿಲ್ಲ.

ಈ ಸಂಗ್ರಹದೊಳಗಿನ 'ಜನ್ಮಾಂತರದ ಜಂಭ' ಉಷಾಪತ್ರಿಕೆಯ ದೀಪಾವಳಿ ಸಂಚಿಕೆಯಲ್ಲಿ 'ಕನಕಾಚಾರ್ಯರ ಕ್ಯೂ' ಎಂಬುದು ಬೆಂಗಳೂರಿನ. **ವಾಣಿ**ಯಲ್ಲಿ, 'ಪಿತೃಗಳ ಪೇಚಾಟ' **ಪ್ರಜಾಮತದ ದೀಪಾವಳಿ** ಸಂಚಿಕೆಯಲ್ಲಿ ಪ್ರಕಟವಾದುವು. ಮಿಕ್ಕವುಗಳೆಲ್ಲ **ಜಯಂತಿ**ಯಲ್ಲಿ ಬಂದುವು

ಪಡಿಯಚ್ಚುಗಳಿಗಾಗಿ **ಜಯಂತಿ**ಯ ಸಂಚಾಲಕರಿಗೆ ಋಣಿಯಾಗಿದ್ದೇವೆ. ಸ್ವಲ್ಪೇ ಅವಧಿಯಲ್ಲಾದರೂ ಸಮಾಧಾನಕಾರಕವಾಗಿ ಮುದ್ರಿಸಿದ್ದಕ್ಕೆ 'ವಿಜಯ'ದ ಒಡೆಯರಿಗೆ ವಂದನೆಗಳು.

ರಂಗಮಂಗ ಪ್ರಕಾಶನ
ಕಾರ್ಯಾಲಯ,
ಧಾರವಾಡ

ಪ್ರಕಾಶಕರು

# ನಾಲ್ಕಾರು ಮಾತುಗಳು

ಹರಟೆ ಎಂಬುದು ತಾತ್ಕಾಲಿಕವಾಗಿ ಓದಿ, ನಕ್ಕು ಮರೆಯುವ ಲೇಖ, ಅದನ್ನು ಸಂಗ್ರಹಿಸುವುದು ಅಷ್ಟೊಂದು ಅಗತ್ಯವೆ—ಎಂದು ಅನೇಕರಿಗೆ ಸಂಶಯ ಬರಬಹುದು. ಆ ಸಂಶಯದ ಸಮಾಧಾನಕ್ಕಾಗಿ ನನ್ನ ಹರಟೆಗಳ ಬಗ್ಗೆ ಒಂದು ನಾಲ್ಕಾರು ಮಾತುಗಳನ್ನು ಇಲ್ಲಿ ಬರೆಯಬೇಕೆಂದಿದ್ದೇನೆ. ನನ್ನ ಲೇಖಗಳ ಬಗ್ಗೆ ನಾನೇ ಬರೆಯುವುದು ಗೌರವವಾದೀತೆ ಎಂದೂ ಸಂಶಯ ಬರಬಹುದಾಗಿದೆ. ನನ್ನನ್ನು ತಿಳಿದುಕೊಂಡವರಲ್ಲಿ, ತಿಳಿದುಕೊಳ್ಳ ಬಲ್ಲವರಲ್ಲಿ ನಾನೇ ಮೊದಲಿಗ ಎಂಬ ಆತ್ಮವಿಶ್ವಾಸದಿಂದಲಿ ನಾನಿಲ್ಲಿ ಬರೆಯುತ್ತಲಿದ್ದೇನೆ. ಇದನ್ನೋದಿದ ವಾಚಕರಿಗೆ ಈ ಸಂಗ್ರಹದ ಸವಿ ಹೆಚ್ಚಿನಿಸುವಂತಾದರೆ ಸಾಕಲ್ಲ ?

ನಾನು ಹರಟೆಗಳನ್ನು ಬರೆಯುವುದಕ್ಕೆ ಮುಖ್ಯವಾಗಿ ಎರಡು ಕಾರಣಗಳು. ಒಂದನ್ನು ಮೇಲೆಯೆ ಸೂಚಿಸಿದ್ದೇನೆ, ಅದಕಾಗಿ ಅದನ್ನೆ ಮೊದಲು ವಿವರಿಸುವೆ. ಅನ್ಯರು ನನ್ನನ್ನು ಅಷ್ಟೊಂದು ಸರಿಯಾಗಿ ತಿಳಿದುಕೊಂಡಿಲ್ಲ, ತಿಳಿದುಕೊಳ್ಳಲಾರರು ಎಂಬ ಧ್ವನಿ ಹೊರಡುವುದಲ್ಲವೆ ಮೇಲೆ ಸೂಚಿಸಿದ ಮಾತಿನಲ್ಲಿ? ನಾನು ಹರಟೆಗಳನ್ನು ಬರೆವುದಕ್ಕೆ ಇದೂ ಒಂದು ಮುಖ್ಯ ಕಾರಣ ಎಂದು ಇಲ್ಲಿ ಹೇಳಬಯಸುತ್ತೇನೆ. ಅನ್ಯರಿಗಾಗಿ ನಾನು ಹೇಳುವ ಮಾತಿನಲ್ಲಿ ಅವರ ಅವಹೇಳನದ ಇಚ್ಛೆಯಂತೂ ಇಲ್ಲವೇ ಇಲ್ಲ; ಅದು ಸರಿಯಾದ ಮಾತು ಎಂದೂ ನಾನು ಹಟ ತೊಡುವುದಿಲ್ಲ. ಆದರೆ ನನಗೆ ಪ್ರಾಮಾಣಿಕವಾಗಿ ಎನ್ನಿಸಿದ್ದು ಹಾಗೆ ಎಂದು ನಾನು ಅದನ್ನು ಹೇಳಲೇಬೇಕಾಗುವುದು. ಇದೇ ನನ್ನ ಮನೋವೃತ್ತಿಗಾಗಿ ನಾನು ಹರಟೆಗಳನ್ನು (ಸಾಮಾನ್ಯವಾಗಿ) ಬರೆಯುತ್ತೇನೆ. ಯಾವುದೊಂದು ವಿಷಯದ ಇಲ್ಲವೆ ಸಂಗತಿಯ ಬಗ್ಗೆ ನನಗೆ ಹೊಳೆದ ವಿಚಾರಗಳನ್ನು ನಾನು ಹರಟೆಯ ರೂಪದಲ್ಲಿ ಹೆಣೆಯುತ್ತೇನೆ. ಆ ಹರಟೆಯ ವಿಚಾರಗಳಲ್ಲಿ ನಾನು ತಿಳಿದುಕೊಂಡ

ಮಟ್ಟಿಗೆ ಪ್ರಾಮಾಣಿಕತೆ ಇದೆ, ಆತ್ಮೀಯತೆ ಇದೆ. ವಾಚಕರಿಗೆ ರುಚಿಸುವು ದಕ್ಕೆ ಈ ವಿಚಾರಗಳ ತಳಹದಿಯಲ್ಲಿದ್ದ ಆತ್ಮೀಯತೆಯೆ ಮುಖ್ಯ ಕಾರಣ ಎಂದು ನಾನು ಭಾವಿಸಿದ್ದೇನೆ.

ವಿಚಾರಗಳು ಪ್ರಾಮಾಣಿಕವಾದುವುಗಳಾದರೆ ಅವನ್ನು ವಿನೋದವದ ಇಲ್ಲವೆ ವ್ಯಂಗ್ಯ ಶೈಲಿಯಲ್ಲಿಯೆ ಯಾಕೆ ಬರೆಯಬೇಕಾಗಿತ್ತು ಎಂಬುದನ್ನು ಆ ಮೇಲೆ ವಿವರಿಸುವೆ. ಮುಂಚೆ, ಇನ್ನೊಂದು ಮಾತನ್ನು ತಿಳಿದುಕೊಳ್ಳುವುದು ಆಗತ್ಯ. ಉಪನ್ಯಾಸ-ನಾಟಕ-ವ್ಯವಹಾರ ಸಂಬಂಧಗಳಲ್ಲಿ ನನ್ನ ಮಿತ್ರರೂ ಬೇರೆ ಕೆಲವರೂ ನಾನು ನಗೆಗಾರ ಎಂದು ತಿಳಿಯುತ್ತಾರೆ. ಪೂರ್ವಜನ್ಮದ ಪಾಪದಂತೆ ಆ ಬಿರುದೆ ನನಗೆ ಅಂಟಿಕೊಂಡಿದೆ. ಅದೊಂದು ತೊಡಕು ನನಗೆ. ನಾನು ನಗೆಗಾರನಹುದೊ ಅಲ್ಲವೊ ಎಂಬ ಪ್ರಶ್ನೆ ಅಪ್ರಸ್ತುತ. ನನ್ನ ದೃಷ್ಟಿ ಯಿಂದ ಮಾತ್ರ ನಾನು ಎಲ್ಲಕ್ಕಿಂತ ಮೊದಲು 'ವಿಚಾರಗುಂಭ' ನಿದ್ದೇನೆ ಎಂದು ನನ್ನ ಹಟ. 'ವಿಚಾರಗುಂಭ' ಎಂಬ ಪದವನ್ನು ಬುದ್ಧಿಪೂರ್ವಕ ವಾಗಿಯೆ ಉಪಯೋಗಿಸಿದ್ದೇನೆ. ಯಾವಾಗಲೂ ಯಾವುದಾದರೊಂದು ವಿಷಯ ನನ್ನ ತಲೆಯಲ್ಲಿ ಸುಳಿದಾಡುತ್ತಿರುವುದು. ಇದರ ಜೊತೆಗೆ ವ್ಯವ ಹಾರದಲ್ಲಿ ಮುಗ್ಧ, ಎಂದರೆ ಸಾಮಾಜಿಕ ಜೀವನದಲ್ಲಿ ಔಪಚಾರಿಕ ಮಾತು ಗಳನ್ನಾಡಲೇ ನನಗೆ ಬರುವುದಿಲ್ಲ! ಈ ಸ್ಥಿತಿಯಲ್ಲಿ ಆಗಾಗ ತಲೆ ತುಂಬಿ ದಂತಾಗಲು ಕೆಲವನ್ನಾದರೂ ನಾನು ಇಂತಹ ಲೇಖನಗಳಲ್ಲಿ ಹೊರಗೆಡುಹು ತ್ತೇನೆ.

ಈ ಮಾತನ್ನು ಹೇಳುವುದರ ತಾತ್ಪರ್ಯವಿಷ್ಟೆ. ನನ್ನ ಹರಟೆಗಳ ಹಿನ್ನೆಲೆಯಲ್ಲಿ ವಿಚಾರಗಳ ಬೆಟ್ಟವೆ ನಿಂತಿದೆ. ಆ ಬೆಟ್ಟದ ತುದಿಯಿಂದ ಆಗಾಗ ಅನೇಕ ಝರಿಗಳು ಹರಿದು ಕೆಳಗಿಳಿಯುವುವು. ನನ್ನ ಹರಟೆಗಳಿಗೆ ಸಾಹಿತ್ಯ ದಲ್ಲಿ ಸ್ಥಾನವಿದೆ ಎಂದು ಯಾವ ವಿಮರ್ಶಕನಾದರೂ ಹೇಳಿದರೆ ಅದು ಈ ಕಾರಣಕ್ಕಾಗಿಯೆ, ಎಂದರೆ ಹಿನ್ನೆಲೆಯಲ್ಲಿ ವಿಚಾರಗಳ ಬೆಟ್ಟವಿದ್ದುದಕ್ಕಾಗಿಯೆ. ಸಾಹಿತ್ಯದಲ್ಲಿ 'ಹರಟೆ'ಗೆ ಸ್ಥಾನ ದೊರೆಯಲು ವಿಚಾರವೈವಿಧ್ಯದ ತಳ- ಹದಿಯೆ ಕಾರಣ. ಇದನ್ನು ಕೇಳಿ ಯಾರೂ ಆಶ್ಚರ್ಯಪಡಬೇಕಾಗಿಲ್ಲ. ವ್ಯವಹಾರದಲ್ಲಾದರೂ ಹರಟೆಗೆ—ಬಾಯ್ಮಾತಿನ ಹರಟೆಗೆ — ಇಂತಹದೆ

ತಳಹದಿ ಇರುವುದು. ಸುದ್ದಿಗಳ ಸಂಗ್ರಹವಿದ್ದವನು ನಿದ್ದೆ–ನೀರಡಿಕೆಗಳ ಪರಿವೆ ಇಲ್ಲದೆ ಹರಟೆ ಹೊಡೆಯುವನು. ಒಂದು ವಿಷಯದ ಸಂಪೂರ್ಣ ಜ್ಞಾನವಿದ್ದರೆ ಹರಟೆಗೆ ಉಪಯೋಗವಿಲ್ಲ. ಹರಟೆಗೆ ಬೇಕಾದುದ್ದು ಪಾಂಡಿತ್ಯವಲ್ಲ, ವೈವಿಧ್ಯ.

ಬಾಯ್ಮಾತಿನ ಹರಟೆಗೂ ಸಾಹಿತ್ಯದ ಹರಟೆಗೂ ಹೀಗೆ ತಾತ್ವಿಕವಾದ ಸಾಮ್ಯವಿದ್ದರೂ ಅವುಗಳ ಸ್ವರೂಪದಲ್ಲಿ ಮಾತ್ರ ಅತ್ಯಂತ ವ್ಯತ್ಯಾಸವಿದೆ. ಬಾಯ್ಮಾತಿನ ಹರಟೆಯ ವೈವಿಧ್ಯದಲ್ಲಿ ಎಷ್ಟೋ ಸಲ ವಿಚಾರಗಳ ಪ್ರಾಮಾಣಿಕತೆ ಮುಖ್ಯವಾಗಿರುವುದಿಲ್ಲ, ಬಿಚ್ಚು ಮಾತಿನಲ್ಲಿ ಹೇಳುವುದಾದರೆ ಬಾಯಿ–ಹರಟೆಗನು ಇದ್ದುದೊಂದೇ ಒಂದು ಮಾತಿನಲ್ಲಿ ನೂರೊಂದು ಸುಳ್ಳುಗಳನ್ನು ಸೇರಿಸಬಹುದು; ಕೇಳುವವರ ಮನರಂಜನೆಯುಷ್ಟೆ ಅಲ್ಲಿಯ ಮುಖ್ಯ ಉದ್ದೇಶ. ಆದರೆ ಸಾಹಿತ್ಯದ ಹರಟೆಗಾರನಿಗೆ ತನ್ನ ಮನಸ್ಸಿನದೂ ಒಂದು ಪ್ರಶ್ನೆ ಇದೆ. ತನ್ನ ಮನಸ್ಸಿನ 'ರಂಜನೆ' ಗಾಗಿಯೆ ಮೊದಲು ಬರೆಯತೊಡಗಿದ್ದಾನೆ; ಇದಿರು ಕುಳಿತು ನಕ್ಕು ಹುರುಪುಗೊಳಿಸುವ ಕಟ್ಟಿಗಾರರಿಲ್ಲವಾದ್ದರಿಂದ ಮನಸ್ಸಿಗೊಪ್ಪದ ಸುಳ್ಳನ್ನು ಅವನು ಹೇಳಲಿಚ್ಛಿಸುವುದಿಲ್ಲ.

ಹೀಗೆ ಹೇಳಿದ 'ಮಾತ್ರಕ್ಕೆ ಹರಟೆಗಾರನು ಸತ್ಯದ ಪ್ರಚಾರವನ್ನಷ್ಟೆ ಮಾಡುವನೆಂದು ತಿಳಿಯಲಾಗದು. ಹರಟೆಯ ಹರಟೆತನ' ವೈಶಿಷ್ಟ–ಇಲ್ಲಿದೆ. ಅದೆಂಥರೆ ಜನರ, ಕೇಳುವವರ ಮನರಂಜನೆಯನ್ನು ಮಾಡುವುದು. ಸತ್ಯದ ಪ್ರಚಾರದ ಶೈಲಿಯಲ್ಲಿ ಬರೆದರೆ ಮನರಂಜನೆಗಿಂತ ಉದ್ಬೋಧವೆ ಹೆಚ್ಚಾದೀತು. ಉದ್ಬೋಧವು ಹರಟೆಯ ಉದ್ದೇಶವಲ್ಲ, ಹರಟೆಯ ಕಲೆ-ಯಲ್ಲ ಅದಕ್ಕೆ ಸ್ಥಾನವೂ ಇಲ್ಲ. ಅದಕಾಗಿ ಸಾಹಿತ್ಯದ ಹರಟೆಗಾರನು ಒಂದು ವಿಶಿಷ್ಟ ಶೈಲಿಯನ್ನೆ ಅನುಸರಿಸುವನು. ಶೈಲಿಯ ಈ ವೈಶಿಷ್ಟದಲ್ಲಿ ವಿನೋ-ದಕ್ಕೆ ಇಲ್ಲವೆ ವ್ಯಂಗ್ಯಕ್ಕೆ ಒಂದು ಸ್ಥಾನವಿದೆ. ಹರಟೆಯ ಶೈಲಿ ವಿನೋ-ದದ್ದೇ ಇಲ್ಲವೆ ವ್ಯಂಗ್ಯವೆ ಇರಬೇಕೆಂಬುದು ಮಾತ್ರ ತಪ್ಪು ಕಲ್ಪನೆ. ಆ ಶೈಲಿಯಲ್ಲಿ ಮುಖ್ಯವಾಗಿ ಇರಬೇಕಾದ ಗುಣ ಮನಸ್ಸನ್ನು ಹಿಡಿಯುವುದು.

ಹರಟೆಯು ಮನೋರಂಜಕತೆಯನ್ನು ಅನೇಕ ವಿಧವಾಗಿ ಸಾಧಿಸ-ಬಹುದಾಗಿದೆ. ಕನ್ನಡದಲ್ಲಿ ಶ್ರೀ. ಸಿದ್ದವ್ವನಹಳ್ಳಿ ಕೃಷ್ಣಶರ್ಮರದೊಂದು

ಶೈಲಿ ಇದೆ. ತೀರ ಸಣ್ಣವಾದ ವಾಕ್ಯಗಳು; ಕೇವಲ ಕುತೂಹಲವನ್ನು ಹೆಚ್ಚಿಸುವಂತಹ ವಾಕ್ಯಾರ್ಥಗಳು. ಈ ಶೈಲಿಯಿಂದ ಕ್ರಮೇಣ ವಾಚಕರ ಮನಸ್ಸನ್ನೆಳೆದುಕೊಂಡು ಆ ಮೇಲೆ ಹೇಳಬೇಕಾದುದನ್ನು ಹೇಳುವುದು.

ಹರಟೆಯ ಶೈಲಿಗೆ ಕನ್ನಡ ಸಾಹಿತ್ಯದಲ್ಲಿ ಸಾಕಷ್ಟು ಉದಾ-ಹರಣೆಗಳಿಲ್ಲ. ಪಾಶ್ಚಾತ್ಯ ದೇಶಗಳಲ್ಲಿ ಹೆಸರಾದ ಪತ್ರಿಕೋದ್ಯಮಿಗಳು (Correspondents) ಈ ಶೈಲಿಯನ್ನು ಬಹಳವಾಗಿ ಪೋಷಿಸಿದ್ದಾರೆ. ಇದು ಸಹಜವೆ. ಅವರ ಜೀವನದಲ್ಲಿ ಅನುಭವದ ವೈವಿಧ್ಯ ಸಾಕಷ್ಟಿದೆ. ಕೆಲವು ಪತ್ರಿಕೋದ್ಯಮಿಗಳಂತೂ ಗ್ರಂಥಗಳನ್ನು ಬರೆದು ಹೆಸರಾಗಿದ್ದಾರೆ. ಬೊಲ್-ಶೆವಿಕ್ ರಶಿಯಾದ ಬಗ್ಗೆ ಇವರು ಬರೆದ ಗ್ರಂಥಗಳೆ ಹೆಚ್ಚು ಲೋಕಪ್ರಿಯ ವಾಗಿವೆ. ಲೂಯಿ ಫಿಶರ್‌ನ ಹೆಸರು ಇಂದು ಭಾರತೀಯರಿಗೆ ಪ್ರೀತಿಪರಿಚಿತ ವಾದುದಿದೆ; Inside Europe ಮತ್ತು Inside Asia ಎಂಬ ಲೋಕಪ್ರಿಯ ಗ್ರಂಥಗಳನ್ನು ಬರೆದ John Gunther ನೂ ನಮಗೆ ಪರಿಚಿತ; ಇವರಿಬ್ಬರೂ ಪತ್ರಿಕೋದ್ಯಮಿಗಳು. ನಮ್ಮಲ್ಲಿಯೆ ಇತ್ತಿತ್ತಲಾಗಿ ಡಿ. ಎಫ್. ಕರಾಕಾ ಮತ್ತು ಅಹಮ್ಮದ ಅಬ್ಬಾಸ್ (ಇವರಿಬ್ಬರೂ The Bombay Chronicle ಪತ್ರಿಕೆಗೆ ಸಂಬಂಧಿಸಿದ್ದಾರೆ) ಎಂಬವರು ಬಹಳೇ ಮಾರ್ಮಿಕವಾದ ಹರಟೆಯ ಶೈಲಿಯನ್ನು ರೂಢಿಯಲ್ಲಿ ತಂದಿದ್ದಾರೆ.

ಈ ಶೈಲಿಯಲ್ಲಿ ಮನೋರಂಜಕತೆ ಮುಖ್ಯ ಎಂದು ಮೇಲೆ ಹೇಳಿದೆ ಯಷ್ಟೆ? ಅದರ ಜೊತೆಗೆಯೆ ಚಿತ್ರರೂಪಕತೆ (picturization)ಯೂ ಈ ಶೈಲಿಯ ವೈಶಿಷ್ಟವಾಗಿದೆ. ಹರಟೆಯ ವಿಷಯವನ್ನಾಗಲಿ ಸಂನಿವೇಶ ವನ್ನಾಗಲಿ ಕೇಳುವವರ (ಓದುಗರ) ಕಣ್ಣು ಕಟ್ಟುವಂತೆ ಬಣ್ಣಿಸಬಲ್ಲ ಶಬ್ದ ರಚನೆ ಎಂಬುದೆ ಈ ಚಿತ್ರರೂಪಕತೆ, ಈ ಚಿತ್ರರೂಪಕತೆಯಿಂದ ವಿಷಯವು ತಟ್ಟನೆ ಓದುಗನ ಮನಸ್ಸನ್ನು ಹಿಡಿಯುವುದು. ನಿಬಂಧ (essay) ದ ಶೈಲಿಗೂ ಹರಟೆಯ ಶೈಲಿಗೂ ವ್ಯತ್ಯಾಸವೆಂದರೆ ಈ ಚಿತ್ರರೂಪಕತೆ. ನಿಬಂಧದಲ್ಲಿ ವಿಷಯಪ್ರತಿಪಾದನೆ ಮುಖ್ಯ, ಹರಟೆಯಲ್ಲಿ ವಿಷಯ-ಮನೋ-ರಂಜಕತೆ ಮುಖ್ಯ. ನಿಬಂಧದಲ್ಲಿ ಸ್ವಾನುಭವದ ತಳಹದಿಯ ಮೇಲೆ ವಿಷ ಯದ ವಿಮರ್ಶೆ ಇರುವುದು, ಹರಟೆಯಲ್ಲಿ ಸ್ವಾನುಭವಕ್ಕೆಯೆ ಬೇರೆ ಬೇರೆ ವಿಷಯಗಳ ವಿಮರ್ಶೆಯು ತಳಹದಿಯಾಗುವುದು. ನಿಬಂಧದಲ್ಲಿ ಒಂದು

ವಿಚಾರವು ಕೊನೆಗೊಳ್ಳುವುದು, ಹರಟೆಯಲ್ಲಿ ಯಾವ ವಿಚಾರಕ್ಕೂ ತುದಿ ಮೊದಲಿಲ್ಲ!

ಹರಟೆಯ ಶೈಲಿಯಲ್ಲಿ ಯಾವ ವಿಚಾರಕ್ಕೂ ತುದಿ ಮೊದಲಿಲ್ಲವೆಂದರೆ ಸಾಹಿತ್ಯದಲ್ಲಿ 'ಹರಟೆ' ಎಂಬುದಕ್ಕೇ ತುದಿಮೊದಲಿಲ್ಲ ಎಂಬ ಅರ್ಥವಲ್ಲ. ಸಾಹಿತ್ಯದಲ್ಲಿ ಹರಟೆಗೆ ಮೊದಲೂ ಇದೆ, ಕೊನೆಯೂ ಇದೆ; ಅದು ಒಂದು ಅನುಭವದ್ದು. ಒಂದು ಅನುಭವವೆಂದರೆ ಒಂದು ನಿರ್ದಿಷ್ಟವಾದ ಬಾಹ್ಯ ವಿಷಯವನ್ನು ಸಂಬಂಧಿಸಿರುವುದು. ಈ ಕಾರಣಕ್ಕಾಗಿ ಹರಟೆ ಎಂಬುದು ಗೊತ್ತುಗುರಿ ಇಲ್ಲದ ವಿಚಾರ ವಿಮರ್ಶೆಗಳ ಮಾಲೆಯಾಗುವುದಿಲ್ಲ. ಬಾಯ್ಮಾತಿನ ಹರಟೆಯಲ್ಲಿ ಕಣ್ಣು ಮುಂದಿದ್ದ ಕೇಳುವವರೆ ಆ ಹರಟೆಗೆ ನಿರ್ದಿಷ್ಟ ಮೇರೆಗಳನ್ನು ಹಾಕುವರು. ಸಾಹಿತ್ಯದಲ್ಲಿ ಹರಟೆಗೆ ನಿರ್ಬಂಧ ಹೀಗೆ ಹೊರಗಿನಿಂದ ಬರುವುದು ಶಕ್ಯವಲ್ಲವಾದ್ದರಿಂದ ಒಳಗಿನಿಂದ–ಎಂದರೆ ಹರಟೆಗಾರನ ಅನುಭವಕ್ಕಾಗಿಯೆ- ಬರುವುದು. ಹರಟೆಯ ವಿಷಯವಾದ ಅನುಭವದ ವಿವೇಚನೆ ಮುಗಿದೊಡನೆ ಹರಟೆ ಮುಗಿವುದು, ಅನುಭವವನ್ನು ಹೇಳಿಯೆ ಹರಟೆಗೆ ಪ್ರಾರಂಭವಾಗುವುದು.

ಈ ಅನುಭವವೆಂದರೆ ಎಂತಹದು? ಅನೇಕ ಓದುಗರ ಮನಸ್ಸನ್ನು ಹಿಡಿಯುವಂತಹದಾಗಿರಬೇಕಾದ್ದರಿಂದ ಓದುಗರಿಗೂ ಸಾಮಾನ್ಯವಾದುದು–ಇಲ್ಲವೆ ಪರಿಚಿತವಾದುದೆ ಇರಬೇಕಾಗುವುದು. ಈ ಮಾತು ಅನುಭವಕ್ಕಷ್ಟೆ ಅನ್ವಯಿಸುವುದು, ಅದರ ಮೇಲೆ ಬೆಳಕನ್ನು ಹಿಡಿಯುವ ವಿಚಾರಗಳಿಗಲ್ಲ. ಈ ವಿಚಾರಗಳು ಮಾತ್ರ—ಅನುಭವವು ಎಷ್ಟು ಸಾಮಾನ್ಯವಾಗಿರುವುದೊ ಅಷ್ಟು—ಅಸಾಮಾನ್ಯವಾಗಿರುವುವು. ಯಾಕೆ? ಹರಟೆಗೆ ಗಾತ್ರವನ್ನು ಕೊಡುವುವು, ಎಂದರೆ ಹರಟೆಯನ್ನು ಬೆಳೆಸಬಲ್ಲವು ಈ ವಿಚಾರಗಳೆ. ಹೀಗಿರುವಾಗ ವಿಚಾರಗಳು ಸಾಮಾನ್ಯವಾಗಿದ್ದರೆ, ಓದುಗರಿಗೆ ಅವುಗಳ ಪರಿಚಯವಿದ್ದುದಕ್ಕಾಗಿ ಅವನ್ನು ಬೆಳೆಯಿಸುವುದರಿಂದ ಮನರಂಜಕತೆಗೆ ಅಡ್ಡಿಯಾಗಬಹುದಾಗಿದೆ.

ಈ ವಿಚಾರಗಳ ಅಸಾಮಾನ್ಯತೆಯೆ ಅನೇಕ ಹರಟೆಗಳ—ನನ್ನ ಹರಟೆಗಳಿಗೂ ಈ ಮಾತು ಅನ್ವಯಿಸುವುದು—ವಿನೋದಶೈಲಿಗೆ ಕಾರಣವಾಗಿರುತ್ತಿದೆ. ಎಲ್ಲಿ ವಿಚಾರವು ಅಷ್ಟೊಂದು ಅಸಾಮಾನ್ಯವಾಗಿರುವುದಿಲ್ಲವೊ

ಅಲ್ಲಿ ವ್ಯಂಗ್ಯತನವು ಸೇರಿ ಮನರಂಜಕತೆಯನ್ನು ಮುಂದರಿಸುವುದು. ಈ ವ್ಯಂಗ್ಯಶೈಲಿಯಿಂದಲೆ ಹರಟೆಗಾರಿಕೆಯ ಇನ್ನೊಂದು ವೈಶಿಷ್ಟ್ಯಕ್ಕೆ ಕಳೆ ಕಟ್ಟುವುದು. ಆ ವೈಶಿಷ್ಟ್ಯವೆಂದರೆ ಹರಟೆಗಾರನ ವ್ಯಕ್ತಿತ್ವವನ್ನು ಮರೆಯಲ್ಲಿರಿಸುವುದು. ಈ ದೃಷ್ಟಿಯಿಂದ ಹರಟೆಯ ಶೈಲಿಗೂ ಕತೆಯ ಶೈಲಿಗೂ ಒಂದು ಸಾಮ್ಯವಿದೆ. ಕತೆಗಾರನು ಕೂಡ ತನ್ನನ್ನು ಮರೆಯಲ್ಲಿರಿಸಿ ಕತೆಯ ವ್ಯಕ್ತಿಸಂನಿವೇಶಗಳನ್ನೆ ಮುಂದೆ ಮಾಡುವನು ಇಲ್ಲವೆ ಅವುಗಳಲ್ಲಿ ಒಂದಾಗುವನು. ಹೀಗೆ ಮಾಡಿದಲ್ಲಿ ಕತೆಯು ಕೇಳುವವರನ್ನು ತಾತ್ಪೂರ್ತಿಕವಾಗಿ ತನ್ನ ವಾತಾವರಣದಲ್ಲಿಯೆ ಕರೆದೊಯ್ಯುವುದು. ಹರಟೆಗಾರನಲ್ಲೂ ಈ ಕಲೆ ಬೇಕಾಗುವುದು. ಆದ್ದರಿಂದ ತಾನು ನಂಬಲಾರದ್ದನ್ನು ಕೂಡ ಅದೇ-ನಿರ್ಲಿಪ್ತ ವನಿಯಲ್ಲಿಯೆ ಹೇಳಬೇಕಾಗುವುದು. ಇದಕಾಗಿ ಹರಟೆಗಾರನು ವ್ಯಂಗ್ಯ ಶೈಲಿಯ ಸದುಪಯೋಗವನ್ನು ಮಾಡಿಕೊಳ್ಳುವನು. ಈ ಸಂಗ್ರಹದೊಳಗಿನ 'ಕನಕಾಚಾರಿಯು' ಹರಟೆಗಳಲ್ಲಿ, 'ಮದುವೆಯ ಮೀಮಾಂಸೆ' ಯಲ್ಲಿ ಕಾಣಿಸಲಾದ ವಿಚಾರಗಳು ಲೇಖಕನ ವಿಚಾರಗಳು ಅಲ್ಲವೇ ಅಲ್ಲ ಎಂಬುದು ಸ್ಪಷ್ಟವಿದ್ದರೂ ಆ ಹರಟೆಗಳನ್ನು ಓದುವ ಮಟ್ಟಿಗೆ ಮಾತ್ರ ಹಾಗೆ ಎನ್ನಿಸುವುದಿಲ್ಲ.

ಕತೆಯ ಸಂಬಂಧದಲ್ಲಿಯೆ ಹರಟೆಯ ಇನ್ನೊಂದು ವೈಶಿಷ್ಟ್ಯವನ್ನು, ಕೊನೆಯದಾಗಿ, ಹೇಳಬಹುದು. ಕತೆಯ ಓಟದಲ್ಲಿ ಸಂನಿವೇಶಗಳ ಜೋಡಣೆಗೆ ಅತ್ಯಂತ ಮಹತ್ವವಿದೆ. ಒಂದು ಸಂನಿವೇಶವು ಇನ್ನೊಂದು ಸಂನಿವೇಶವನ್ನು ಹುಟ್ಟಿಸುವಂತೆ ಒಂದರೊಂದರ ಸಂಬಂಧವಿರುವುದು- ಇದು ತರ್ಕದ ಸಂಬಂಧವಲ್ಲ. ಹರಟೆಯಲ್ಲೂ ಹಾಗೆಯೆ. ಸಂನಿವೇಶದ ಬದಲಾಗಿ ವಿಚಾರ ಎಂದಿಟ್ಟುಕೊಳ್ಳಬೇಕು. ಒಂದು ವಿಚಾರವು ಇನ್ನೊಂದು (ಮುಂದೆ ಬರುವ) ವಿಚಾರವನ್ನು ಹುಟ್ಟಿಸುವುದೇನೊ ಎನ್ನುವಂತಹ ಜೋಡಣೆ ವಿಚಾರಗಳಲ್ಲಿ ಬೇಕು. ವಿಚಾರ—ವಿಚಾರಕ್ಕೆ ಹೊಂದಿಕೆ ಇರದಿದ್ದರೆ ವಾಚಕನು ಯೋಚನೆಗೆ ತೊಡಗಬೇಕಾಗುವುದು, ಅಷ್ಟರ ಮಟ್ಟಿಗೆ ಮನರಂಜಕತೆಗೆ ತಡೆಯುಂಟಾಗುವುದು. ಈ ಮಾತನ್ನು ಅರಿತುಕೊಳ್ಳದೆ ಅನೇಕರು ಹರಟೆ ಎಂದರೆ ಅಸಂಬದ್ಧ ವಿಚಾರಗಳ ಮಾಲೆ ಎಂದು ತಿಳಿಯುತ್ತಾರೆ. ಬಾಯ್ಮಾತಿನ ಹರಟೆಯಲ್ಲಿ ಅಸಂಬದ್ಧತೆ ನಡೆಯಬಹುದು; ಯಾಕೆಂದರೆ ಹರಟೆಗಾರನ

ಮೂರ್ತಿ ಕಣ್ಣೆದುರಿನಲ್ಲಿರುವುದರಿಂದ, ಆ ಹರಟೆಗಾರನ ವ್ಯಕ್ತಿತ್ವದಿಂದ ಆ ಅಸಂಬದ್ಧತೆ-ತಾತ್ಕಾಲಿಕವಾಗಿ ಸುಸಂಬದ್ಧವೆನ್ನಿಸುವುದು. ಆದರೆ ಲೇಖನದ ಹರಟೆಯಲ್ಲಿ ಕಣ್ಣೆದುರಿನಲ್ಲಿರುವ ಕರಿ-ಬಿಳಿ ಮಸಿ-ಗುರುತುಗಳು ಜೀವಂತ ವಾದ ವ್ಯಕ್ತಿಯ ಕೆಲಸವನ್ನು ನೀಗಿಸಲಾರವು. ಕತೆಯಲ್ಲಿಯ ಜೋಡಣೆಗೂ ಹರಟೆಯಲ್ಲಿಯ ಜೋಡಣೆಗೂ ಒಂದು ವ್ಯತ್ಯಾಸವಿದೆ ಕತೆಯ ಓಟವು ನದಿಯ ಪ್ರವಾಹದಂತೆ, ಸಂತತವಾದದ್ದು; ಹರಟೆಯ ಓಟವು ಪಕ್ಷಿಯ ಹಾರಾಟದಂತೆ, ಒಂದು ಕಡೆ ತಡೆದರೂ ಮತ್ತೊಂದು ಕಡೆ ತಟ್ಟನೆ ಹಾರು ವುದು; ಮನರಂಜಕತೆಯ ದೃಷ್ಟಿಯಿಂದ ಹೇಳುವುದಾದರೆ ಗಿಡದಿಂದ ಗಿಡಕ್ಕೆ ಜಿಗಿವ ಮಂಗನಂತೆ ಎಂದು ಉದಾಹರಿಸಬಹುದು.

ಹರಟೆಗೆ ಸಾಹಿತ್ಯದಲ್ಲಿ ಸ್ಥಾನವಿದೆಯೆ, ಇದ್ದರೆ ಯಾವ ಸ್ಥಾನ, ಹರಟೆಯ ಸ್ವರೂಪವೇನು, ವೈಶಿಷ್ಟ್ಯವೇನು, ಶೈಲಿ ಯಾವುದು-- ಮೊದ-ಲಾದ ಅನೇಕ ಪ್ರಶ್ನೆಗಳನ್ನು ಚರ್ಚಿಸುವ ಯೋಗ್ಯತೆ, ಅಧಿಕಾರ ಮತ್ತು ಕರ್ತವ್ಯ ಬೇರೆ ಬೇರೆ ಸಾಹಿತ್ಯಗಳ ವಿಶಾಲ ಮತ್ತು ಆಳವಾದ ಪರಿಚಯ-ವಿದ್ದ ವಿಮರ್ಶಕನದು. ನಾನಿಲ್ಲಿ ವಿಮರ್ಶಕನ ಸ್ಥಾನವನ್ನು ಆಕ್ರಮಿಸ ಬಯಸಿಲ್ಲ. ಆದರೆ ಕನ್ನಡ ಸಾಹಿತ್ಯಕ್ಕಿದ್ದ ವಿಮರ್ಶಾಶಾಸ್ತ್ರದ ಅಭಾವವನ್ನು ಬಹುದಿವಸ ಸಹಿಸಿಕೊಳ್ಳಲು ನನಗೆ ಮನಸ್ಸಿಲ್ಲ. ಆದ್ದರಿಂದ ಸಂಖ್ಯೆಯಿಂದ ನೋಡಿದಾಗ ಎಲ್ಲರಿಗಿಂತಲೂ ಹೆಚ್ಚು ಹರಟೆಗಳನ್ನು ಬರೆದವ, ಗುಣದಿಂದ ನೋಡಿದಾಗಲೂ ಮೇಲ್ತರಗತಿಯ ಹರಟೆಗಳನ್ನು ಬರೆಯಬಲ್ಲ ಹರಟೆಗಾರ ನಾನು ಎಂಬ ಆತ್ಮವಿಶ್ವಾಸದ ಹೆಮ್ಮೆಯಿಂದ, ನನ್ನ ಅನುಭವಗಳ ಅಧಿಕಾರ-ದಿಂದ, ಓದುಗರಿಗೆ ಹೆಚ್ಚಿನ ಅನುಕೂಲ ಮತ್ತು ಲಾಭ ಆಗಲಿ ಎಂಬ ಆಸೆ-ಯಿಂದ ಈ ನಾಲ್ಕಾರು ಮಾತುಗಳನ್ನು ಬರೆದಿದ್ದೇನೆ. ಸರಿ ಎನ್ನಿಸಿದರೆ ಸಂತೋಷ, ಸರಿ ಎನ್ನಿಸದಿದ್ದರೆ ಯೋಗ್ಯತೆಯ ವಿಮರ್ಶಕನನ್ನು ಕೆಣಕು-ವಂತಾಗಿ ಇನ್ನಷ್ಟು ಸಂತೋಷ.

ಶ್ರೀರಂಗ

# ಪ-ರಿ-ವಿ-ಡಿ









ಕರ್ನಾಟಕದ
ಫ್ರೋಜ್ ಲಾರೆಟ್
ಹೆರ್ ಜಡೀರ್

# ಯುದ್ಧದ ಸ್ವಂತ ಸುದ್ದಿಗಾರ

ಮಹನೀಯರೆ, ಮಹಾಯುದ್ಧಕ್ಕೆ ಮತ್ತೆ ಪ್ರಾರಂಭವಾಗಿದೆ. ಹೇಳುವ ಕಾರಣವಿಷ್ಟೆ, ಕಾಗದ-ಮಶಿ-ಪೆನ್ ಮೊದಲಾದ ಎಲ್ಲ ಸಲಕರಣೆಗಳ ಬೆಲೆ ಏರಿದೆ; ಅದಕ್ಕನುಗುಣವಾಗಿ ಬರೆಯುವ ಲೇಖದ ಬೆಲೆಯೂ ಏರಬೇಕೆಂದು ತಾವು ಅಪೇಕ್ಷಿಸಿದ್ದರೆ ಅದು ಸಹಜವೆ, ಆದರೆ ಒಂದು ಮಾತನ್ನು ನಾನು ಹೇಳುವೆ-ಅಥವಾ, ನನ್ನ ಮಾತೇಕೆ?– ನಮಗೂ ನಿಮಗೂ ಹಿರಿಯರೆನಿಸುವ, ವೇದ–ಶಾಸ್ತ್ರ–ಸದಾಚಾರಸಂಪನ್ನರಾದ **ಕುದುರೆ—ಮೋತಿಯ ಕನಕಾಚಾರ್ಯರ** ಒಂದು ಮಾತನ್ನು ಹೇಳುವೆ. ಯುದ್ಧ ಸುರುವಾಗುವುದೆಂದು ಯೋಗದೃಷ್ಟಿಯಿಂದ ಕಂಡು, ಸರಕುಗಳ ಬೆಲೆ ಏರುವುದೆಂದು ಸ್ವಪ್ನಸಾಕ್ಷಾತ್ಕಾರದಿಂದ ಅರಿತು, ಅವರು ಯುದ್ಧದ ಮುನ್ನಾದಿನವೆ ಸಾಮಾನುಗಳನ್ನು ಸಂಗ್ರಹಿಸಿಡಬೇಕೆಂದು ಕಿರಾಣಿ ಅಂಗಡಿಗೆ ಬಂದಿದ್ದರು. ಮಾತಿಗೆ ಮಾತು ಬೆಳೆದು ನಸ್ಯದ ನಗೆಮೊಗದಿಂದ ಹೀಗೆ ಹೇಳಿದರು: “ಇದು ನೋಡಿರಿ, ದಿನಾಲು ಮೂರ್ಮೂರು ನಾಲ್ನಾಲ್ಕು ಗಂಟೆ ಆಹ್ನಿಕ ಮಾಡುವ ನಾನು ಈ ಹೊತ್ತು ಐದು ನಿಮಿಷಗಳಲ್ಲಿಯೇ ಕುದುರೆಗೆ ಹುಲ್ಲು ಹಾಕುವವನಂತೆ ಬೆನ್ನು ಬಡಿದು ಎದ್ದೆ. ಯಾಕೆ? ಯುದ್ಧದ ಕಾಲದಲ್ಲಿ ಹೀಗೆಯೆ ಮಾಡತಕ್ಕದ್ದು ಎಂದು ನನ್ನ ಅಭಿಪ್ರಾಯ!” ನಮಗೆಲ್ಲರಿಗೂ ಆಶ್ಚರ್ಯವಾಯಿತು. ಯುದ್ಧಕ್ಕೂ ಆಹ್ನಿಕಕ್ಕೂ ಸಂಬಂಧವೇನು? ಹಾಗೆ ನೋಡಿದರೆ ಯುದ್ಧದ ನಿಮಿತ್ತದಿಂದ–ಉದಾಹರಣೆಗಾಗಿ, ವಿಷವಾಯು (poison gas) ಪ್ರಯೋಗವಾಯಿತೆಂದು ತಿಳಿಯಿರಿ–ಒಮ್ಮೊಮ್ಮೆ ದಿವಸಾನು–ದಿವಸ ಮೂಗು ಹಿಡಿಯುವ ಪ್ರಸಂಗ ಬರಬಹುದಾಗಿದೆ ಹೀಗಿರಲು ಇಷ್ಟರಲ್ಲಿ ಆಚಾರ್ಯರೆ ಮುಂದುವರಿಸಿದರು:— “ಯುದ್ಧ ಎಂದರೆ ಯುರೋಪದ ಮಹಾಯುದ್ಧವಲ್ಲ, ಮನೆಯಲ್ಲಿ ಆಕೆಯ—” ಸಾಕು. ನಮಗೆಲ್ಲರಿಗೂ ತಿಳಿಯಿತು, ಆಚಾರ್ಯರು ಐದುನಿಮಿಷದಲ್ಲಿ ಮುಂವೆ ಹರವಿದ ನೂರಾರು ದೇವರುಗಳಿಂದಲೂ ರಕ್ಷಿತರಾಗದೆ ಮನೆಯಿಂದ ಯಾಕೆ ಕಾಲೆ ಗೆದರೆಂಬುದು.

ವಾಚಕರೇ, ನಗಬೇಡಿರಿ. ನಾನು ಈ ಸಂದರ್ಭದಲ್ಲಿ ಆಚಾರ್ಯರ ಉದಾಹರಣೆಯನ್ನು ಯಾಕೆ ಕೊಡುತ್ತಿರುವೆನೆಂಬುದರ ರಹಸ್ಯ ಹೊಳೆದಿದೆಯೆ ನಿಮಗೆ ? ಯಾವ ಮಾತೇ ಆಗಲಿ, ಸ್ವಲ್ಪದರಲ್ಲಿ ಅದರ ಸ್ವಾರಸ್ಯವನ್ನು ತಿಳುಹಿಸಿಕೊಡುವ ಕೌಶಲ್ಯ ಅವರಲ್ಲಿದೆ. ನಾವು—ಲೇಖಕರು—ಅವರಿಂದ ಈ ಗುಣವನ್ನು ಕಲಿತುಕೊಳ್ಳಬೇಕಾಗಿದೆ. ಈಗ ನೋಡಿರಿ, ಈಗ ನಡೆದಿರುವ ಯುದ್ಧದ ವಿಷಯು ನಮಗೆ ಯಾರಿಗೂ ತಿಳಿದಿರಲಿಲ್ಲ. ಸಂದರ್ಭಾನುಸಾರವಾಗಿ ಆಚಾರ್ಯರನ್ನು ಕೇಳಿದೆವು. ಅವರು ಒಂದರೆನಿಮಿಷ ಧ್ಯಾನಮಗ್ನರಾದವರಂತೆ ಸುಮ್ಮನಿದ್ದು ಆ ಮೇಲೆ ಒಮ್ಮೆಲೆ ತಮ್ಮ ಸುತ್ತುಮುತ್ತಲಿನ ಸಂಸಾರಬಂಧನವನ್ನೇ ಮರೆತವರಂತೆ ನಮ್ಮ ಪ್ರಶ್ನೆಯನ್ನೇ ಅಲಕ್ಷ್ಯಮಾಡಿ—'ನನ್ನ ಮಾತನ್ನೇ **ನೋಡಿರಿ**' ಎಂದರು. ಇದೇನು ! ಎಷ್ಟು ನೋಡಿದರೂ ಕನಕಾಚಾರ್ಯರ ಸಂಸಾರಕ್ಕೂ ಹಿಟ್ಲರನ ಸಾಹಸಕ್ಕೂ ಯಾವ ಸಂಬಂಧವಿದೆ ಎಂಬುದು ನಮಗೆ ತಿಳಿಯದಂತಾಯಿತು. ನಕ್ಕರು ಆಚಾರ್ಯರು, ಮೊದಲು ಶ್ರೋತೃಗಳನ್ನು ಬೆರಗುಗೊಳಿಸಿ ಅವರ ಕೌತೂಹಲವನ್ನು ಹೆಚ್ಚಿಸುವ ತಮ್ಮ ಕಲೆಗಾಗಿ ಹೆಮ್ಮೆಯಿಂದ ನಕ್ಕರು, ಮತ್ತು ಹೇಳತೊಡಗಿದರು:— "ನನ್ನ ಮಾತನ್ನೇ **ನೋಡಿರಿ, ಅಂದೆ.** ಅಡಿಗೆಯ ಮನೆ ನನ್ನದು, ಅದರೊಳಗ ನೀವು ಕೈಹಾಕಬೇಡಿರಿ, ಕಾರಭಾರ ಮಾಡಬೇಡಿರಿ-" ಅಂತಾಳ ನಮ್ಮ ಮನೆಯಾಕೆ. ಆಕೆಯ ಮಾತೇನೊ ಯಥಾರ್ಥ ಅಂತ ನಿಮಗ ಅನ್ನಿಸಬಹುದು, ನನಗೂ ಅನಿಸಿತ್ತು. ಆದರೆ ಮುಂದೆ ಕೇಳಿರಿ. ಅಡಿಗೆಯ ಮನೆ ಅಂದರ ಅದಕ್ಕ ಸಂಬಂಧಿಸಿದ್ದು ಎಲ್ಲಾ ನನ್ನದು ಅಂತಾಳೆ. 'ಅದಕ್ಕೆ ಸಂಬಂಧಿಸಿದ್ದು ಎಲ್ಲಾ' ಅಂದ್ರೇನು ? ಸಾಮಾನು ಸೂಮಾನು, ಭಾಂಡಿ—ಕೋಂಡಿ—ಮತ್ತ ಇಷ್ಟೇ ಅಲ್ಲ-ಅದನ್ನು ತರೋದು—ಹೊರೋದು—ಅರ್ಥಾತ್ ಅದಕ್ಕೆ ಬೇಕಾಗೊ ರೊಕ್ಕ—ರುಜು—ಒಟ್ಟು ಒಂದು ಮಾತಿನೊಳಗೆ ನಾನು ಗಳಿಸೋದೆಲ್ಲ ಆಕೆಯ ಕೈಯೊಳಗೇ ಬೇಕು ! ಅದಕ್ಕೇ ಹೇಳಿದೆ, ನನ್ನ ಮಾತನ್ನೇ ನೋಡಿರಿ ಅಂತ. ಅಡಿಗೆಯ ಮನೆ ನನ್ನದು ಅನ್ನೋ ಆಕೆಯ ಮಾತಿಗೆ ನಾನು ಒಪ್ಪಿಕೊಂಡರೆ ಪ್ರಸಂಗ ಎಲ್ಲಿಯವರೆಗೆ ಬರೋದು ! ನನ್ನ ಮನೆಯೊಳಗೇ ನಾನು ಕೂಲಿ ಇದ್ದಾಂಗೆ, ಬಾಡಿಗೆ ಕೊಟ್ಟಾಂಗೆ ಅಥವಾ ಗುಲಾಮನಾದಾಂಗೆ ! " ಆಚಾರ್ಯರು ಮತ್ತೆ

ಗಂಭೀರ–ಮೌನಮುದ್ರೆಯನ್ನು ತಾಳಿ ನಸ್ಯದ ಕುಂಭಕ, ಸಮಾಧಾನದ ರೇಚಕಗಳಿಂದ ಪ್ರಾಣಾಯಾಮಪರರಾದರು. ಕೆಲಹೊತ್ತಿನ ಮೇಲೆ ನಾವೆಲ್ಲರೂ ಇನ್ನೂ ಸುಮ್ಮನಿದ್ದುದನ್ನು ನೋಡಿ " ಹೆಂಡತಿ ಏನು, ಹಿಟ್ಲರ್ ಏನು–ಸಡಿಲು ಬಿಟ್ಟರೆ ಎಲ್ಲಾ ರಂಡೇವು ಒಂದೇ! " ಎಂದರು.

ವಾಚಕರು ನಗಕೂಡದೆಂದು ಮತ್ತೊಮ್ಮೆ ಕೈಮುಗಿದು ಬೇಡುವೆ. ಆಚಾರ್ಯರ ಮಾತಿನ ಶೈಲಿ ನಮಗೆ ಕೆಲವರಿಗೆ ಪರಿಚಿತವಿದ್ದಂತೆ ವಾಚಕರನೇಕರಿಗೆ ಇರಲಿಕ್ಕಿಲ್ಲ ಇಂದಿಗೆ ನಾಲ್ಕೈದು ವರ್ಷಗಳಾದುವು, ಮಾತಿನ ಭರದಲ್ಲಿ ಇದನ್ನು ಆಚಾರ್ಯರು ಮೇಲಿಂದಮೇಲೆ ಹೇಳುತ್ತಿರುವರು. ' ನೀನು ನನ್ನ ಪಂಚಪ್ರಾಣ' ಎನ್ನುವ ಅನುರಾಗದಿಂದ ಅವರು ಐದನೆಯ ಹೆಂಡತಿಯನ್ನು ಮಾಡಿಕೊಂಡವರೆಂಬುದು ನಮಗೆ ಗೊತ್ತು, ಆದರೆ ಆ ಪುಣ್ಯಾತ್ಮಳಿಗೆ ಗೊತ್ತಿಲ್ಲದಂತೆ ಕಾಣುವುದು. ಅದಕಾಗಿಯೆ ಪಂಡಿತರಾದ ಆಚಾರ್ಯರು ಎಲ್ಲವನ್ನೂ ಉದಾರಸಹನೆಯಿಂದ ನುಂಗಿ ' ಐದನೆಯ ಮದುವೆಯಾಯಿತು ಎಂದರೆ ಪಂಚತ್ವಂ ಗತಃ ಎಂದು ಭಾಷಾಂತರಿಸಬೇಕು' ಎಂದು ಹಾಸ್ಯದಿಂದ ಸಂಸ್ಕೃತ ಪಾಠಕ್ಕಾಗಿ ಬಂದ ವಿದ್ಯಾರ್ಥಿಗಳೆದುರು ನಗುತ್ತಲೆ ಇರುವರು. ಹಿಟ್ಲರನ ಪ್ರಾಬಲ್ಯ ಹೆಚ್ಚಾದಂದಿನಿಂದೆ ಮಾತ್ರ ' ಹೆಂಡತಿ ಒಂದೇ ಹಿಟ್ಲರ್ ಒಂದೇ ' ಎಂಬ ವಾಕ್ಯದಿಂದ ಸಮಾಧಾನವನ್ನು ತಂದುಕೊಳ್ಳುತ್ತಿರುವರು.



ಈಗ ಮಾತ್ರ ಆಚಾರ್ಯರಿಗೆ ಕಾರ್ಮೋಡದ ಕಗ್ಗತ್ತಲೆಯಲ್ಲಿ ಮಿಂಚೊಂದು ಸುಳಿದಂತಾಗಿದೆ. ಯುದ್ಧ ಪ್ರಾರಂಭವಾದಂದಿನಿಂದ ಅವರ

ಮುಖಮುದ್ರೆ ಕ್ರಮೇಣ ಹೆಚ್ಚೆಚ್ಚು ಪ್ರಸನ್ನವಾಗತೊಡಗಿದೆ. 'ಹಿಟ್ಲರ-ವಾದ ಮಣ್ಣುಗೂಡಿದ್ದನ್ನು ನನ್ನ ಕಣ್ಣು ನೋಡಲಿ' ಎಂದು ಮುಪುಕ ಚೆಂಬರಲೇನನು ಗದ್ದರಿಸಿದಾಗ 'ಭಪ್ಪರೆ, ಗಂಡಸು!' ಎಂದು ತೊಡೆ ಚಪ್ಪರಿಸಿದರು ಆಚಾರ್ಯರು. "ಯುರೋಪವೆಲ್ಲ ತನ್ನದೇ ಆಗಬೇಕೆಂದು ಹವಣಿಸುತ್ತಾನೆ ಹಿಟ್ಲರ್. ಇಂತಹ ಹುಚ್ಚನನ್ನು ಎಲ್ಲಿಯಾದರೂ ನೋಡಿರುವಿರಾ?" ಎಂದು ಯಾರಾದರೂ ಕೇಳಿದರೆ ಆಚಾರ್ಯರು ತಟ್ಟನೆ ಹಿರಿತನದಿಂದ "ಹುಚ್ಚು ಯಾಕೆ! ದಡ್ಡ ರಂಡೇಮಕ್ಕಳು ಇರೋದೇ ಹಾಗೆ. ಬೇಕಾದರೆ ಒಂದು ದಿವಸ ಬಂದು ನೋಡಿರಿ ನಮ್ಮಲ್ಲಿ" ಎಂದು ಅವನನ್ನು ನಿರುತ್ತರನನ್ನಾಗಿ ಮಾಡುವರು. ಅವರ ಮುಖಮುದ್ರೆ ಪ್ರಸನ್ನವಾಗ ತೊಡಗಿದೆ ಎಂದು ಹೇಳಿದೆನಲ್ಲವೆ? "ಇಂತಹಾದ್ದರ (=ಹೆಂಡತಿ) ಜೋಡಿ ಸಂಸಾರ ಅಂದ್ರೆ ಒಂದು ಮಹಾಯುದ್ಧ" ಎಂಬ ಅವರ ಅಭಿಪ್ರಾಯಕ್ಕೆ ಇಂದು ಉದಾಹರಣೆ ದೊರಕಿದಂತಾಗಿದೆ. ಮೊದಲಿನಿಂದಲೇ ಮೈ-ಕೈ ಮೆತ್ತಗೆ ಮಾಡಿದ್ದರೆ ಈ ಸ್ಥಿತಿ ಎಲ್ಲಿ ಬರುತ್ತಿತ್ತು?'—ಎಂದು ಅವರ ಪ್ರಶ್ನೆ. 'ನಾನು ಮನೆಯೊಳಗ ಮಾಡಿದ ತಪ್ಪನ್ನು ನಿಮ್ಮ ಚೇಂಬರೀಲೀನಾ ಆ ಹಿಟ್ಲರನ ಜೋಡೀ ಮಾಡಿದ'- ಎಂದು ಅವರ ಉತ್ತರ. ಅದೂ ಹೋಗಲಿ-ಅವರ ಪ್ರಸನ್ನತೆಗೆ ಮುಖ್ಯ ಕಾರಣ ಬೇರೆಯೆ ಇದೆ. 'ಇನ್ನೇನು ಯುದ್ಧ ಸುರು ಆಯ್ತು, ತಿಂಗಳೆರಡು ತಿಂಗಳೊಳಗೆ ಬಂಗಾರದ ಧಾರಣೆ ಇಳಿಯುವುದು, ಅಂತೂ ನಮ್ಮ ಜೀವಮಾನದೊಳಗೆಯೆ ನಮ್ಮ ಧರ್ಮಪತ್ನಿಯದೊಂದು ಹುಚ್ಚು ಹೌಸು ಪೂರೈಸೋದು ಸಾಧ್ಯ—ಎಂಬುದಕ್ಕಾಗಿ ಆಚಾರ್ಯರ ಪ್ರಸನ್ನತೆ.

ನಾನು ಹೇಳುವ ಮಾತುಗಳಿಂದ ನಮ್ಮ ಕನಕಾಚಾರ್ಯರ ವಿಷಯವಾಗಿ ತಮ್ಮ ಕಲ್ಪನೆಯೆ ಬೇರೆಯಾಗಬಹುದು. 'ಇವರೇನೊ ಸ್ವಾರ್ಥ ಸಾಧಕರು, ಕಠೋರಹೃದಯರು — ಅತ್ತ ಯುರೋಪದೊಳಗೆ ಕೋಟಿಗಟ್ಟಲೆ ನಿರಪರಾಧಿ ಜೀವಿಗಳು ಹುಳುಗಳಂತೆ ಉದುರಿ ಸಾಯುವಾಗ ಇತ್ತ ಇವರಿಗೆ ಆ ಯುದ್ಧ ಅನುಕೂಲ ಪ್ರಸಂಗವಾಗಿ ಬಿಟ್ಟಿದೆಯಲ್ಲ'—ಎಂದು ಮುಂತಾಗಿ ತಾವು ಅಸಹ್ಯ ಪಡಬಾರದು. 'ಯುದ್ಧ ನಡೆದಿದೆ, ಪ್ರಾಣಹಾನಿ ಅಡ್ಡ ಮಳೆಯಂತೆ ಸುರೀತಿದೆ; ಅದೆಲ್ಲ ನಿಜ. ಅದಕ್ಕೆ ನಾವೇನು ಮಾಡಬೇಕು

ಹೇಳು' ಎಂದು ಅವರು ಯಾವಾಗಲೂ ಕೇಳುತ್ತಾರೆ. 'ಅವರವರ ಕರ್ಮಫಲ ಅವರು ಉಣ್ತಾರೆ. ನಾನಂತೂ ಹೇಳಿ ಕೇಳಿ ಬಡ ವೈದಿಕ ಬ್ರಾಹ್ಮಣ. ಅರಣ್ಯದೊಳಗ ಹಾವು ಕಡಿದರೂ ನನಗೆ ಬರೋ ತನಕ ಜೀವ ಹೋಗಲಿಕ್ಕಿಲ್ಲ; ಹಾಸಿಗೆಯೊಳಗೇ ಸಾಯುವ ಚಟ ಅಷ್ಟಿದೆ ನಮಗೆ–ಬ್ರಾಹ್ಮಣರಿಗೆ. ಹಾಂಗ ಕೇಳಿದರೆ ನಿಮ್ಮ ಗಾಂಧೀಯ-ಆ ಅಹಿಂಸಾ ನಡೆದಂದಿನಿಂದ ಹಾಸಿಗೆಯೊಳಗೇ ಸಾಯೋದು ಇಡಿಯ ದೇಶದ ಹಣೆಯೊಳಗೇ ಬರೆ ಧಾಂಗ ಕಾಣಸ್ತದೆ. ಆದರೂ-' ಇಲ್ಲಿಗೆ ಸಸ್ಮಯವಾಗಿ ಅವರ ದೃಷ್ಟಿಯೊಡನೆ ಆಕಾಶದೊಳಗೆ ತೇಲುವುದು ಅವರ ವಿಚಾರ ಪ್ರವಾಹ.

'ಯುದ್ಧ ಸುರುವಾದುದಕ್ಕೆ ಸ್ವರಾಜ್ಯ ಸಿಕ್ಕುವುದು ಖಂಡಿತ' ಎಂಬ ನಮ್ಮ ಹರ್ಷದ ಉದ್ಗಾರಕ್ಕೆ ಆಚಾರ್ಯರ ಸಹಾನುಭೂತಿ ಇಲ್ಲ. 'ಸ್ವರಾಜ್ಯ ಗಿರಾಜ್ಯ ಇದೆಲ್ಲ ಐಹಿಕವಿಚಾರ' ಎಂದು ಅವರ ಅಭಿಪ್ರಾಯ; ಇದಲ್ಲದೆ ಅವರೇ ಹೇಳುವ ಅವರ ಮನೆಯ ಪರಿಸ್ಥಿತಿ ಲಕ್ಷ್ಯದಲ್ಲಿಟ್ಟರೆ, ಸ್ವರಾಜ್ಯ ಸಿಕ್ಕರೇನು ಯಾವ ರಾಜ್ಯ ಸಿಕ್ಕರೇನು—ಆಚಾರ್ಯರಿಗೆ ಅದರಲ್ಲಿ ಆಸಕ್ತಿ, ಅದಕಾಗಿ ಆತುರ ಹುಟ್ಟದೆ ಇದ್ದದ್ದು ಸಹಜವೆ ಇದೆ. ಅವರು ಮತ್ತೊಂದು ಮಾತನ್ನು ಹೇಳುತ್ತಿದ್ದರು. "ಹೋದ ಸಾರೆ ಇಲೆಕ್ಶನಿನ ಕಾಲಕ್ಕೆ ನೀವು ಯಾರಿಗೆ ಹೋಟು (vote) ಕೊಡ್ತೀರಿ ಅಂತ ಆಕೆ ನನ್ನ ಕೇಳಿದಳು! ನನಗೂ ಹೋಟು ಅದೆ ಅಂತ ಅನ್ನೋ ಆಕೆಯ ಜಂಭದೊಳಗ ಇಡಿಯ ಇಲೆಕ್ಶನ್ ದಿವಸ ನಮಗ ಏಕಾದಶಿಯಾಯಿತು. ಅಲ್ಲ, ಕೈಲಾಗದ ಹೆಣ್ಮಂಡೇವಕ್ಕ ಹೋಟು ಇದ್ದ ಇಲೆಕ್ಶನಿನೊಳಗ ನಾನು ಹೋಟು ಹಾಕಲಿಯಾ! ಹೆಂಗಸರಿಗೆ ಹೋಟು ಕೊಟ್ಟದ್ದು, ನಿಮ್ಮ ಹಿಟ್ಲರಗ ಹುರುಪು ಕೊಟ್ಟದ್ದು ಎರಡೂ ಒಂದೇ. ಈಗ ನೋಡಿದಿರಿಲ್ಲೋ, ಎಲ್ಲರಿಗೂ ಏಕಾ–ದಶಿಯ ಹೊತ್ತು ಬಂದಿದೆ, "

ಇಂದಿಗೆ ಹದಿನೈದು ದಿವಸಗಳಾದುವು. ಕನಕಾಚಾರ್ಯರ ಕಟ್ಟೆಯೆ ನಮ್ಮ ರೇಡಿಯೊ ಸ್ಟೇಶನ್. ಯುದ್ಧದ ಸವಿಸ್ತಾರ ಸುದ್ದಿ ನಮಗೆ ಸಾಕ್ಷಾತ್ ಕನಕಾಚಾರ್ಯರ ಸರಸಸಮ್ಮುಖದಿಂದ ದೊರೆಯುವುದು ಜರುಗಿದ ಸುದ್ದಿ ಏಕೆ, ಜರುಗಲಿರುವ ಭವಿಷ್ಯದ ಚಿತ್ರ ಕೂಡ ಆಚಾರ್ಯರ ಯೋಗ ಶಕ್ತಿಯಿಂದ ನಮಗೆ ಲಭಿಸುವುದು. 'ಆಚಾರ್ಯರೆ, ಸದ್ಯದ ಲಕ್ಷಣ

ಗಳನ್ನು ನೋಡಿದರೆ ಹಿಟ್ಲರನ ಹುಚ್ಚಾಟಕ್ಕೆಯೆ ಪ್ರಾಬಲ್ಯ ದೊರೆಯು ವಂತಿದೆ' ಎಂದು ನಾವು ಕೇಳಿದರೆ ಟೋರ್ಪೆಡೊ ಸುಯ್ಯುಡುವಂತೆ ನಸ್ಯ ವನ್ನೇರಿಸಿ ನಮ್ಮನ್ನು ಗಂಭೀರ ಮೌನಮುದ್ರೆಯಿಂದ ದಿಟ್ಟಿಸುವರು. 'ಸುರು-ವಿನ ಅಬ್ಬರ ಹೀಗೇ' ಎಂದು ಸುಮ್ಮನಾಗುವರು. 'ನೋಡಿದಿರಿಲ್ಲೊ ನಮ್ಮ ಮನೆಯಲ್ಲಿ! ಬೆಳಗಿನಿಂದ ಸಂಜೆಯುವರೆಗೆ ಮಾತಿನ ಸುರಿಮಳೆ–! ಆಯಿತು. ಸಂಜೆಗೆ ಬರಿಕೈಯಿಂದ ನಾನು ಬಂದೆ. 'ಎಲ್ಲಿದೆ? ಅಡಿಗೆಗೆ ಕಾಯಿಪಲ್ಲೆ ಎಲ್ಲಿದೆ? ನಾಳೆಗಾಗಿ ಅಕ್ಕಿ ಎಲ್ಲಿದೆ?' ನಾನು ಯಾವುದನ್ನೂ ತರುವುದಿಲ್ಲ. ಅದೇ ನನ್ನ ಶಸ್ತ್ರ. ಯಾವಾಗ ಊಟಕ್ಕೆ ಸೊನ್ನೆ ಎಂದು ಕಂಡುಬರುವುದೊ ಆಗ ನಿಂತಿತು ನೋಡಿರಿ ಮಾತುಗುಂಡಿನ ಮಹಾಯುದ್ಧ. ಅದೇ ಹೇಳಿದೆನಲ್ಲ. ಹೆಂಗುಸು ಒಂದೇ, ಹಿಟ್ಲರ ಒಂದೇ!'

ನಮಗಂತೂ ಆಚಾರ್ಯರ ಮಾತಿಗಾಗಿ ಅನೇಕ ಸಲ ಹೊಟ್ಟೆ ಹಿಡಿಸ ದಷ್ಟು ನಗೆಬರುವುದು. ಇಡಿಯ ವಿಶ್ವದ ವ್ಯವಹಾರವನ್ನೆ ತಮ್ಮ ಸಂಸಾರಕ್ಕೆ ಹೋಲಿಸುವ ಅವರ ನಿಸ್ವಾರ್ಥದೃಷ್ಟಿ, ಆ ಹೋಲಿಕೆಯನ್ನು ಬಣ್ಣಿಸುವ ಅವರ ಮನೆಮಾತಿನ ಶೈಲಿ—ಇದಕಾಗಿ ಯಾರಿಗೆ ನಗೆ ಬರಲಿಕ್ಕಿಲ್ಲ? ಹಾಗೆ ಕೇಳಿದರೆ ಅದನ್ನೆಲ್ಲ ನೀರಸವಾಗಿ ಬಣ್ಣಿಸುವ ಈ ಲೇಖದಿಂದ ನಿಮಗೆ ಕೂಡ ಒಂದೆರಡು ಕಡೆ ನಗೆ ಬರಬಹುದು. ಹಾಗಿದ್ದರೆ ನಮ್ಮ ಒಂದು ಅನುಭವ ವನ್ನು ನಿಮಗೆ ಹೇಳಿಡುವೆ. ಒಮ್ಮೆ ಆಚಾರ್ಯರು ಹೇಳಿದರು–'ಏನೇ ಆಗಲಿ, ಶ್ರಾವಣೀ ಆದ ಮೇಲೆ ಯುದ್ಧ ಪ್ರಾರಂಭ ಆಯಿತು ಅನ್ನೋದು ನನ್ನ ಸುದೈವ' ಅಂದರು. ನಾವು ಮುಂದೇನೊ ಬರುವುದೆಂದು ಸುಮ್ಮ-ನಿದ್ದೆವು. ಬಂದಿತು ಮುಂದೆ ಈ ಮಾತು :— 'ಇಲ್ಲಾ ಅಂದರೆ ಎಲ್ಲಾದರ ಜೋಡಿ ಜನಿವಾರದ ಧಾರಣೀನೂ ಏರತಿತ್ತು—ನನ್ನಾಂಗ ಐದೈದು ಹೆಂಡಂದಿರಿಗಾಗಿ ಐದೈದು ಜೋಡು ಜನಿವಾರ ಧರಿಸುವವರ ಸೊಂಟದ ಸುರುಳಿಗೆ ಏಟು ಬೀಳತಿತ್ತು' ಎಂದರು. ನಮಗೆಲ್ಲರಿಗೂ ಅನಿವಾರ ನಗೆ. ಯುದ್ಧಕ್ಕೂ ಜನಿವಾರಕ್ಕೂ ಯಾವ ಗಂಟನ್ನು ಹಾಕಿದರು ಆಚಾರ್ಯರು ಎಂದು ಕುತೂಹಲ ಬೇರೆ. 'ಇಷ್ಟು ತಿಳಿಯೋದಿಲ್ಲವೆ ನಿಮಗೆ?' ಎಂದು ಅಬ್ಬರಿಸಿದರು; 'ಬ್ರಾಹ್ಮಣನಿಗೆ ಯುದ್ಧಭೂಮಿಗೆ ಹೋಗಬೇಕಾಗಿಲ್ಲ. ಅದಕಾಗಿ ಯುದ್ಧ ತಪ್ಪಿಸಬೇಕು ಅನ್ನೋ ಲಕ್ಷಾವಧಿ ಜನ, ತಾವು

ಬ್ರಾಹ್ಮಣರು ಅಂತ ತೋರಿಸಲಿಕ್ಕೆ ಜನಿವಾರ ಹಾಕಬೇಕು ಅಂಬುವವರು. ಹೀಗೆ ಜನಿವಾರ ಬೇಕಾಗೋದು ಬಹಳ ಜನರಿಗೆ. 'ಮೂರುವವರ ಸುಗ್ಗಿಯು ಕಾಲ ಇಂತಹದು, ಎರಡೆ ಧಾರಣೆ?' ಎಂದರು. ನಮಗೆ ನಗೆ ತಡೆಯು ದಂತಾಯಿತು. ಆಚಾರ್ಯರು ಗಂಭೀರಮುದ್ರೆಯಿಂದಲೆ ಮಾತನ್ನು ಮುಂದುವರಿಸಿದರು; — 'ಎಲ್ಲಾದರ ಧಾರಣೆ ಏರಿದೆ, ಅದಕಾಗಿ ಮಿತ-ವ್ಯಯದಿಂದ ನಡೆದುಕೊಳ್ಳಬೇಕಾಗುವುದು. ಆದ್ದರಿಂದ ಈಗಿನ ಯುದ್ಧದ ಕಾಲದಲ್ಲಿ ನೀವು ಮಿತವ್ಯಯದಿಂದಲೇ ನಗಬೇಕು.'

ಇದಲ್ಲವೇ ಸ್ವಲ್ಪದರೊಳಗೆ ಸ್ವಾರಸ್ಯ?

---

# ಕುದುರೆಮೋತಿ ಕನಕಾಚಾರ್ಯರು

ನಮ್ಮ ಕನಕಾಚಾರ್ಯರ ಮಾತಿನ ರೀತಿಯನ್ನು ನಿಮಗೆ ತಿಳುಹಿಸಿರುವೆನಷ್ಟೆ; ಅವರ ಹೆಸರಿನದೂ ಒಂದು ರೀತಿ ಇದೆ. ಮೊನ್ನೆ ಒಳ್ಳೆಯ ಮೋಜಿನಿಂದ ಆಚಾರ್ಯರು ಅದನ್ನು ಪ್ರಸ್ತಾವಿಸಿದರು. ಒಮ್ಮೆಲೆ ೧೫—೨೦ ದಿವಸಗಳ ವರೆಗೆ ಆಚಾರ್ಯರ ದರ್ಶನವೇ ನಮಗಿರಲಿಲ್ಲ. ತರುವಾಯ ಅಕಸ್ಮಾತ್ ಅಂಗಡಿಯಲ್ಲಿ ಸೇರಿದ ನಮ್ಮ ಸಭೆಗೆ ಸ್ವಾರಿ ಬಿಜಯಂಗೈಸಿತು. 'ಏನು, ಆಚಾರ್ಯರೆ, ಇಷ್ಟು ದಿವಸ ತಮ್ಮ ಭೆಟ್ಟಿ ಇಲ್ಲ; ತಮ್ಮ ಅಧ್ಯಕ್ಷತೆಯ ಅಲಂಕಾರವಿಲ್ಲದೆ ನಮ್ಮ ಸಭೆ ವಿಧವೆಯ ಹಣೆಯಂತಾಗಿತ್ತು' ಎಂದು ನಮ್ಮಲ್ಲಿ ಒಬ್ಬ ಕಿಡಿಗೇಡಿ ನುಡಿದ. ಆಚಾರ್ಯರು ಕೂಡಲೆ ಹಿರಿಯತನದಿಂದ 'ಹೆ, ಅವಲಕ್ಷಣಾ! ಅಲಂಕಾರಕ್ಕಾದರೂ ಮುತ್ತೈದೆಯನ್ನು ಕರೆಯಬಾರದೆ' ಎಂದರು ...ಪ್ರಾರಂಭವಾಯಿತು; ನಗೆಗಡಲಿನ ಅಲ್ಲೋಲಕಲ್ಲೋಲ... 'ದಿನಾಲು ಭೆಟ್ಟಿ ಕೊಡತಿದ್ದಿಲ್ಲಪೆ ಊಟದ ಹೊತ್ತಿಗೆ ಹಯಗ್ರೀವ?— ಕುದುರೆಮೋತಿ?' ಎಂದು.... ಆಚಾರ್ಯರ ಮಾತಿನಲ್ಲಿ ಇಂತಹ ಬ್ರಾಹ್ಮಣ್ಯದ ವರ್ಚಸ್ಸಿದೆ—ಒಮ್ಮೆ "ನಿಮಗೆ 'ಕುದುರೆಮೋತಿ' ಎಂಬ ಹೆಸರು

ಹೇಗೆ ಬಂದಿತು ? ” ಎಂದು ಕೇಳಿದ್ದಕ್ಕೆ ‘ ನನ್ನ ಸಂಸಾರ ಟಾಂಗಾಕ್ಕೆ ಹೂಡಿದೆ’ ಎಂದಿದ್ದರು !

ರೂಢಿಯಂತೆ ಮಾತಿಗೆ ಮಾತು ಬೆಳೆದು ಮತ್ತೆ ಯುದ್ಧದ ಮಾತಿಗೆ ಪ್ರಾರಂಭವಾಯಿತು. ‘ ಅಂತೂ ಚೇಂಬರಲೇನರು ಎಷ್ಟೊಂದು ಅಬ್ಬರಿಸಿದರೂ ಪೋಲಂಡದೇಶ ಹಾಳಾಯಿತಲ್ಲ ? ’ ಎಂದ ಒಬ್ಬ. ‘ ಅದಕ್ಕೇ ಸಂಸಾರ ಅನ್ನೋದು, ಮಗೂ ’ ಎಂದು ಆಚಾರ್ಯರು ದನಿ ಎಳೆದರು; ನಮಗೆಲ್ಲರಿಗೂ ಆಶ್ಚರ್ಯ. ಪೋಲಂಡ ಹಾಳಾಗುವುದು ಆಚಾರ್ಯರ ಸಂಸಾರ ಶಾಸ್ತ್ರಕ್ಕೆ ಹೇಗೆ ಅನ್ವಯಿಸಿತು ?—ಆಚಾರ್ಯರೆ ಮುಂದುವರಿಸಿದರು— ‘ ಘಟಸ್ಥಾಪನಾದ ದಿವಸ ಹೋಳಿಗೆ ಮಾಡಬೇಕೊ, ಕರಿಗಡಬು ಮಾಡಬೇಕೊ ಅಂತ ವಾದಕ್ಕೆ ಬಿದ್ದಿತು ನಮ್ಮಲ್ಲಿ; ಆಗ ನಾನು ಸಂಧ್ಯಾವಂದನೆ ಮಾಡತಿದ್ದೆ, ಆಕೆ ಗಡಿಗೆಯಲ್ಲಿ ಮೊಸರು ಕಡಿಯುತ್ತಿದ್ದಳು. ವಿಷಯ ವಾದಕ್ಕೆ ಬಿದ್ದರೂ ಕೊನೆಗೆ ಪೆಟ್ಟು ಗಡಿಗೆಗೆ ಬಿದ್ದಿತು, ಗಡಿಗೆ ಹಾಳಾಯಿತು. ಸಂಸಾರ ಅಂದರೆ ನಡೆಯೋದೇ ಇದೆಲ್ಲ. ಗಡಿಗೆ ಹಾಳಾಯಿತಲ್ಲ--- ಅಂದರೆ ? ವಾದ ಮುಗಿದು ಮರುದಿವಸ ಮುಂಜಾವಿಗೆ ಬಂದಿತು ಮತ್ತೊಂದು ಗಡಿಗೆ. ಈಶ್ವರನ ಇಚ್ಛಾ ಇಲ್ಲದೆ ಯಾವುದನ್ನು ಯಾರು ಹಾಳು ಮಾಡುವರು ? ’ ಎಂದು ಒಮ್ಮೆಲೆ ಭಕ್ತಿವಿನೀತರಾಗಿ ಆಕಾಶದಲ್ಲಿ ದೃಷ್ಟಿಯನ್ನಿಟ್ಟರು ಆಚಾರ್ಯರು. ನಾವೂ ಅವರ ಮಾತಿನ ಚಾತುರ್ಯದಿಂದ ಪರವಶರಾಗಿ ಮೇಲೆಯೆ ನೋಡಿದೆವು ....

‘ ಯುದ್ಧ–ಯುದ್ಧ ಅಂತ ಸುರು ಆಗೋದರೊಳಗ ನಿಂತೇ ಹೋಯಿತಲ್ಲರೀ ಆಚಾರ್ರೆ ! ’ ಎಂದು ಶಿಷ್ಯನಂತೆ ಯಾವನೋ ಪ್ರಶ್ನೆ ಮಾಡಿದನು. ಆಚಾರ್ಯರ ಮುಖ ಆಕಾಶದಿಂದ ಕೆಳಗಿಳಿಯಿತು, ಕೆಲಹೊತ್ತು ಭಕ್ತಿ ಸಾಯುಜ್ಯದಿಂದ ಪ್ರಪಂಚವನ್ನೆ ಮರೆತವರಂತೆ ,ಶೂನ್ಯದೃಷ್ಟಿಯಿಂದ ನೋಡಿ ಆ ಮೇಲೆ ಒಮ್ಮೆಲೆ ಎಚ್ಚತ್ತವರಂತೆ...‘ ಯುದ್ಧ ? ಯುದ್ಧ ಮುಗಿಯಿತು? ಯಾರು ಹೇಳಿದರು ? ನಮಗೂ ನಿಮಗೂ ಹಾಗೆ ಅನಿಸಬಹುದು; ಆದರೆ ನೆರೆಮನೆಯವರಿಗೆ ಕೇಳಿ—ಯುದ್ಧ ಮುಗಿದಿದೆ ಏನು ? ’ ಎಂದರು.

ಕನಕಾಚಾರ್ಯರ ಕಣ್ಣಿಗೆ ಜಗತ್ತೆಲ್ಲ ಗಂಡ-ಹೆಂಡಂದಿರ ಸಂಸಾರದಷ್ಟು ಸಂಕುಚಿತವಾಗಿ ಕಾಣುವುದು ಎಂದು ಯಾರಾದರೂ ಟೀಕಿಸಬಹುದು,

ಇಂದು ಜಗತ್ತನ್ನೆ ಸುಡಬಹುದಾದ ಈ ಕೊಲೆಗಡಕ ಯುದ್ಧದ ಸ್ವರೂಪ ಇಂತಹ 'ಮನೆಮೂಲೆಬಾಕ'ರಿಗೆ ತಿಳಿಯಬಹುದೆ—ಎಂದು ಕಲಿತವರೂ ತಿರಸ್ಕಾರದಿಂದ ಮೂಗು ಏರಿಸಬಹುದು. ಅಂತಹ ಮಾತುಗಳಿಗೆ ನಾನಾ-ದರೂ ಯಾವ ಉತ್ತರವನ್ನು ಕೊಡಲಿ? ಬೇಕಾದವರು ಸಾಕ್ಷಾತ್ತಾಗಿ ಕನಕಾಚಾರ್ಯರ ಸನ್ನಿಧಿಯ ಅನುಭವವನ್ನು ಪಡೆಯಲಿ, ಆ ಮೇಲೆ ಮಾತನಾಡಲಿ ಎಂದಿಷ್ಟೆ ನಾನು ಹೇಳಬಲ್ಲೆ. ಅಷ್ಟೊಂದು ಅಭಿಮಾನ ನಮ್ಮೆಲ್ಲರಿಗೂ ಇದೆ ಆಚಾರ್ಯರಿಗಾಗಿ. ನಮ್ಮ ಪಾಲಿ-ಗಂತೂ ಅವರು ಸಾವಿರ ನಾಲಗೆಗಳ ಶೇಷ, ಸಾವಿರ ಕಣ್ಣುಗಳ ಇಂದ್ರ, ಸಾವಿರ ಕೈಗಳ ವಿಷ್ಣು ಸರ್ವೋತ್ತಮ. ವಿಮಾನಗಳಿಂದ ಬಾಂಬುಗಳನ್ನು ಒಗೆಯುವರೆಂದು ನಾವೂ ನೀವೂ ದಿನಾಲು ಓದುವುದಿಲ್ಲವೆ? ಅವುಗಳ ಪರಿಣಾಮವೇನೊ ಅನರ್ಥ ಎಂದು ಸ್ಥೂಲವಾಗಿ ನಮಗೆ ಗೊತ್ತು. ಆದರೆ ಹೆಚ್ಚಿನ ಸೂಕ್ಷ್ಮ ಕಲ್ಪನೆ ನಮಗಾಗಲಿ ನಿಮಗಾಗಲಿ ಇದೆಯೆ? ಒಂದು ದಿವಸ ಇದೇ ಮಾತು ಆಚಾರ್ಯರಿದ್ದಾಗ ನಡೆಯಿತು- ತಟ್ಟನೆ ಹೇಳಿದರು—'ಬಾಂಬು-ಬಾಂಬು ಎಂದರೇನು? ಅದಕೇಕಿಷ್ಟು ಹೆದರಿಕೆ? ತಲೆಯಮೇಲೆ ಅಕ್ಕಿಕಾಳುಗಳನ್ನು ಒಗೆಸಿಕೊಂಡ ವೀರರು ನಾವು' ಎಂದರು! ನಮಗೂ ತಾತ್ಕಾಲಿಕವಾಗಿ ಆಚಾರ್ಯರಿಗಿರಬಹುದಾದ ಅಜ್ಞಾನಕ್ಕಾಗಿ ಕನಿಕರ ಹುಟ್ಟಿತು. ಬಾಂಬುಗಳ ಘಾತಕ ಸ್ವರೂಪವೆತ್ತ? ಅಕ್ಕಿಕಾಳುಗಳ—ಇಷ್ಟರಲ್ಲಿ ಆಚಾರ್ಯರೆ ಮಾತನಾಡಿದರು—ಹೊಡೆತದಿಂದ ಸಂಸಾರಕ್ಕೆ ಪ್ರಾರಂಭವಾಗುವುದು. ಹೊಟ್ಟೆ-ಬಟ್ಟೆ-ಮಕ್ಕಳು-ಮರಿ-ಬೇನೆ-ಬೇಸರಿಕೆ-ಬಡತನ--- ಇವುಗಳನ್ನೆಲ್ಲಾ ಪ್ರಜ್ವಲಿಸುವ ಅಕ್ಕಿ



ಕಾಳುಗಳ ಮುಂದೆ, ನೀರಿನಿಂದ ಆರಿಸ ಬಹುದಾದ ಬೆಂಕಿಯನ್ನು ಹೊತ್ತಿ-ಸುವ ಬಾಂಬುಗಳೆಂದರೆ, ಹನುಮಂತನ ಮುಂದೆ ಹಾರುಗುಬ್ಬಿ' ಎಂದರು! ಸತ್ಯವಾದ ಮಾತು ಎಂದರೂ ಅಹುದು, ಅತಿಶಯೋಕ್ತಿ ಎಂದರೂ ಅಹುದು. ಅದಕ್ಕಲ್ಲವೆ ನಾವು ಕನಕಾಚಾರ್ಯರ ಕೈಗೊಂಬೆಗಳಾದದ್ದು?

'ಈ ಸಲದ ನವರಾತ್ರಿ–ದೀಪಾವಳಿಗಾಗಿ ಯುದ್ಧ ತಡೆಯಲ್ಪಟ್ಟಿದೆ' ಎಂದರು ಆಚಾರ್ಯರು. 'ಜಗತ್ತಿನಲ್ಲಿ ಇಂತಹ ಅನಾಹುತ ನಡೆದಾಗ ನೀವು ಹಬ್ಬವನ್ನು ಹೇಗೆ ಆಚರಿಸಿದಿರಿ?' ಎಂದು ಯಾರೊ ಕೇಳಿದ್ದಕ್ಕೆ 'ಸೆಂಟ್ರಲ್ ಗವರ್ನ್ಮೆಂಟಿಗೆ ಕೇಳಿರಿ' ಎಂದು ಉತ್ತರ ಕೊಟ್ಟಿದ್ದರು ಆಚಾರ್ಯರು. ಅವರು ತಮ್ಮ ಮನೆಯವರಿಗೆ ಸೆಂಟ್ರಲ್ ಗವರ್ನ್ಮೆಂಟ್ ಎನ್ನೋದರಲ್ಲೂ ಒಂದು ಮೌಜು ಇದೆ. 'ಅರ್ಧದಿವಸ ಅಡುಗೆಯ ಒಲೆಯ ಮುಂದೆ, ಅರ್ಧದಿವಸ ಕತ್ತಲೆಯ ಮುಸುಕಿನೊಳಗೆ–ಹೀಗೇ ದಿಲ್ಲಿ-ಸಿಮ್ಲಾಗಳ ವ್ಯವಸ್ಥೆ ಇರೋದರಿಂದ 'ಸೆಂಟ್ರಲ್ ಗವರ್ನ್ಮೆಂಟ್' ಎಂದು ಹೇಳುವರು! ಅದೂ ಹೋಗಲಿ; ಕಾಂಗ್ರೆಸ್ ಸರಕಾರಗಳು ರಾಜೀನಾಮೆ ಕೊಟ್ಟ ದಿವಸ ಆಚಾರ್ಯರ ಮುಖದಲ್ಲಿ ಉದ್ವಿಗ್ನತೆಯ ಕಳೆ ಇದ್ದಿತು. ಅವರಿಗೂ ರಾಜ ಕಾರಣಕ್ಕೂ ಎಂದಿಗೂ ಸಂಬಂಧವಿದ್ದಿರಲಿಲ್ಲ, ಆದರೂ ಈ ದಿವಸ ಇವರು ರಾಜೀನಾಮೆಗೆ ಕಳೆಗುಂದಿದರಲ್ಲ—ಎಂದು ನಮಗೆ ಆಶ್ಚರ್ಯವಾಯಿತು. ಅಷ್ಟರಲ್ಲಿ 'ಈ ಹೊತ್ತು ರಾತ್ರಿ ಇಲ್ಲಿಯೆ ಆಟವಾಡೋಣ, ನಾನು ಮನೆಗೆ ಹೋಗೋದಿಲ್ಲ' ಎಂದರು. ನಮಗೆ ಇನ್ನಿಷ್ಟು ಕುತೂಹಲ—ಮನೆಯಲ್ಲಿ ಹೊಸದೇನೊ ಪ್ರಕರಣವಾಗಿದೆ ಎಂದು. ಮುಂದೆ ಕೆಲಹೊತ್ತಿನಲ್ಲಿ 'ಛೆ! ಇದೇನು ಹುಚ್ಚು? ನಾನು ಮನೆಗೆ ಹೋಗಲೇಬೇಕು' ಎಂದರು. ನಮಗೆ ತಡೆಯದಂತಾಯಿತು. 'ಯಾಕೆ, ಆಚಾರ್ಯರೆ, ರಾಜೀನಾಮೆಗಳಿಂದ ಇಷ್ಟು ಉದ್ವಿಗ್ನರಾಗಿರುವಿರಾ?' ಎಂದರು ನಮ್ಮಲ್ಲೊಬ್ಬರು. ಬೆದರಿದ ಕುದುರೆಯಂತೆ ಕಾಲುಜಾಡಿಸಿದರು ಆಚಾರ್ಯರು: 'ರಾಜೀನಾಮೆ? ಎಲ್ಲಿಯ ರಾಜೀನಾಮೆ? ನಿಮಗೆ ಯಾರು ಹೇಳಿದರು?' ಎಂದರು. 'ಯಾರ್‍ಯಾರು ಹೇಳುವುದು? ಎಲ್ಲ ಪತ್ರಿಕೆಗಳಲ್ಲೂ ಪ್ರಕಟವಾದ ಸುದ್ದಿಯದು.' ಇಷ್ಟೆಂದ ಕೂಡಲೆ ಖೊಳ್ಳನೆ ನಕ್ಕರು–'ಅಯ್ಯೋ, ಹುಚ್ಚಗಳಿರಾ, ಆ ರಾಜೀನಾಮೆ? ಅದರದೇನು ಸಂಬಂಧ? ನನ್ನ ಮಾತು ಹೇಳಿದೆ. ನನ್ನ ಮನೆಯಲ್ಲಿ ನಾನು

ಸ್ವತಂತ್ರ ಅಂತ ನೀ ಒಪ್ಪಿಕೊಳ್ಳದಿದ್ದರೆ ನಾ ಮನೆ ಬಿಟ್ಟು ಹೋಗ್ತೀನಿ- ಅಂದು ಅಕೆಯ ಮೇಲೆ ಸಿಟ್ಟಾಗಿ ಹೊರಬಿದ್ದಿದ್ದೆ. ಅದು ಹುಚ್ಚು-ಎಂ; ಹಾಗಾದರೆ- ನಿಮಗೆ ಗೊತ್ತಿರಲಿಲ್ಲ-ಹಹ' ಎಂದು ನಗೆಯಿಂದ ಸಾದ್ಯಂತ ವಾಗಿ ಅಂದು ಮನೆಯಲ್ಲಿ ನಡೆದುದೆಲ್ಲವನ್ನೂ ಬಣ್ಣಿಸಿದರು.

ಆಚಾರ್ಯರ ಮಾತುಗಳಿಂದ ಮನೆಯು ಹೆಂಡತಿಗಾಗಿ ಅವರಿಗೆ ತಿರಸ್ಕಾರ ಅಥವಾ ಅಸಹ್ಯ ಇದ್ದಿತು ಎಂದು ಯಾರೂ ತಿಳಿಯಬಾರದು. ಅವರು ಹಳೆಯ ಪದ್ಧತಿಯವರಾದರೂ ಕಳಕಳಿಯ ಹೃದಯದವರು— ಎಂಬುದನ್ನು ನಾವೇ ಎಷ್ಟೋ ಸಲ ಮರೆಯುತ್ತಿದ್ದೆವು. ಒಂದು ದಿವಸ ತಾವೇ ಹೇಳಿದರು:— 'ನಿಂ ಚೆಂಬರ್ಲೀನನಲ್ಲಿ ಒಂದು ತಪ್ಪು ಇದೆ ನೋಡಿರಿ. ಅವಶ್ಯ ಬಿದ್ದಾಗ ನಾಲ್ಕು ಏಟು ಕೊಟ್ಟರೆ ಏನು ತಪ್ಪು? ನಿನ್ನೆ ನಮ್ಮ ಮನೆಯೊಳಗೆ ಆ ಪ್ರಸಂಗ ಬಂದಿತು, ಅನಿರ್ವಾಹ. ಹೆಂಗಸರ ಜೋಡಿ ವಾದಕ್ಕ ಬೀಳಬಾರದು. ಈಗ ನೋಡಿರಿ, ಈಗ; ತಾವ್ಹೊಂದು ಮಾತಾಡಿದರ ಹಿಟ್ಲರನೂ ಒಂದು ಮಾತಾಡತಾನ. ಯುದ್ಧ ಅಂದರೆ ಯುದ್ಧ. ನಿನ್ನೆ ನಾಲ್ಕು ಏಟು ಕೊಟ್ಟೆ; ಮುಗಿಯಿತು ವಾದ; ಈವತ್ತು ನಡೆಯಿತು ಮತ್ತೆ ಮುಂದಿನ ಸಂಸಾರ' ಎಂದು ಎರಡೂ ಸುದ್ದಿಗಳನ್ನು ಒಂದೇ ಉಸಿರಿನಲ್ಲಿಯೆ ಬಣ್ಣಿಸಿದರು. ಹೆಂಡತಿಗಾಗಿ ಪ್ರೇಮವಿದೆ, ಸಾಕಷ್ಟಿದೆ.' ಆದರೂ ಒಮ್ಮೊಮ್ಮೆ ಮನೆಯೊಳಗೆ ಹುಡುಗರ ಸಲುವಾಗಿ ಆದ್ರೂ ಹೆಂಡತೀನ್ನ ಹೊಡೆಯ ಬೇಕಾಗತದಲ್ಲ? ಹೆಂಡತಿಗೆ ನಾ ಹೆದರಿದರೆ, ನನಗೆ ಹುಡುಗರು ಹೇಗೆ ಹೆದರಬೇಕು? ವ್ಯವಹಾರ ಅದು. ಅದಕೇ ಅನಿರ್ವಾಹ ಅಂದೆ.' ಎಂದರು ಮತ್ತೊಮ್ಮೆ.

'ಜರ್ಮನರಂತಹ ಪ್ರತಿಭಾಸಂಪನ್ನ ಜನರು ಹಿಟ್ಲರನಂತಹ ಅಸಂಸ್ಕೃತ ನನ್ನು ಹೇಗೆ ಮುಂದಾಳು ಮಾಡಿಕೊಂಡರೊ!' ಎಂದು ಅನೇಕರು ಆಶ್ಚರ್ಯ ಪಡುವರು, ಆದರೆ ಕನಕಾಚಾರ್ಯರಿಗೆ ಅದರಲ್ಲಿ ಎಳ್ಳಷ್ಟೂ ಆಶ್ಚರ್ಯವಿಲ್ಲ. ನನ್ನಂತಹ ನಾನು ಇಂತಹಾದ್ದನ್ನ (ಹೆಂಡತಿಗಾಗಿ ಅವರು ಹೇಳುವ ರೀತಿ) ಹ್ಯಾಗೆ ಮದುವೆಯಾದೆ? ಆಶ್ಚರ್ಯದ ವಿಷಯ ಅಲ್ಲ ಇದು, ಈಶ್ವರೀ ಸಂಕೇತ ಇದು' ಎನ್ನುವರು ಪರಮಾತ್ಮನಲ್ಲೂ ಆಚಾರ್ಯರಿಗೆ ಅತ್ಯಂತ

ಶ್ರದ್ಧೆ; 'ಯುದ್ಧ ಸುರುವಾಯಿತು, ಆಚಾರ್ಯರೆ' ಎಂದು ಮೊದಲನೆಯ ಸಲ ನಾವು ನುಡಿದಾಗ 'ಈಶ್ವರೀಸಂಕೇತ ಅದು' ಎಂದೇ ಉತ್ತರ ಕೊಟ್ಟಿದ್ದರು. ಆಗ ನಮಗೆ ಅದರ ಅರ್ಥವಾಗಿರಲಿಲ್ಲ. ಮೊನ್ನೆ ಸಂದರ್ಭಾನುಸಾರ ಆ ವಿಷಯವನ್ನು ಅವರೇ ಪ್ರಸ್ತಾವಿಸಿದರು. 'ತನಗೆ ಮಕ್ಕಳೆಷ್ಟು ಅಂತ ನಮ್ಮಾಕೆ ಒಬ್ಬ ಭಿಕ್ಷುಕನಿಗೆ ಭವಿಷ್ಯ ಕೇಳತಿದ್ದಳು. ಅದನ್ನು ನೋಡಿ ನಿಮ್ಮ ಜರ್ಮನಿಯವರು ರಶಿಯಾದವರ ಕೈಹಿಡಿದರು ಅಂತ ಹೇಳತಿದ್ದಿರಲ್ಲ. ಅದರ ನೆನಪಾಯಿತು. ಯಾಕಂದರೆ, ಮುಟ್ಟಿದರೆ ಮೈಲಿಗೆ ಅಂತ ನಮ್ಮಾಕೆ ಧೋತರಾ ಸುತ್ತಿಕೊಂಡು ಕೈಯೊಳಗ ಕೈ ಕೊಟ್ಟಿದ್ದಳು. ಆಶ್ಚರ್ಯ ಏನು ಇದರಲ್ಲಿ? ಯಾರ ಮನಸ್ಸು ಯಾರಿಗೆ ತಿಳಿಯೋದು? ಅದೆಲ್ಲಾ ಈಶ್ವರೀ ಸಂಕೇತ. ಅಷ್ಟ್ಯಾಕೆ? ಹಿಂದಕೊಮ್ಮೆ ಯುದ್ಧ ಸುರುವಾಯಿತು ಅಂದಿದ್ದಿರಲ್ಲ– ನೀವು? ಚೇಂಬರೀಲೀನಾಗ ವಾಹವ್ವಾ ಅಂದೆವಲ್ಲ ನಾವು? ಈಗ ನಿಜವಾಗಿಯೆ ಯುದ್ಧ ಸುರುವಾಯಿತೂ ಅಂತೆ ಅದೇ ಚೇಂಬರೀಲೀನಾರು ಕೈಕಾಲು ಸತ್ತು ಹಾಸಿಗೀನೆ ಹಿಡಿದಾರಂತೆ—'

'ಅವರಿಗೆ ಸಂಧಿವಾತ (rheumatism) ಅಂತೆ. ಪಾಪ!' ಎಂದು ಯಾರೋ ನಾಲಗೆ ಲೊಚಕರಿಸಿದರು. 'ಆದರೇನಾಯಿತು? ಹಾಸಿಗೆ ಮ್ಯಾಲಿಂದ ಬೈದಾಡೋದೇ ಯುದ್ಧ ಅಂತ ಯಾರಿಗೆ ಗೊತ್ತಿತ್ತು? ಅದಕೇ ಹೇಳಿದೆ ಅದೆಲ್ಲಾ ಈಶ್ವರೀಸಂಕೇತ' ಎಂದವರೇ ನಸ್ಯ ಏರಿಸುವ ಘರ್ಘರ ಸದ್ದಿನಲ್ಲಿ ವಿಮಾನಿನಂತೆ ಎದ್ದು ಲಗಬಗೆಯಿಂದ ಹೋದರು ಆಚಾರ್ಯರು.

---

## ಕನಕಾಚಾರ್ಯರು ಕಮ್ಯುನಿಸ್ಟರಾದರೆ?

ಮೊನ್ನೆ ನಮ್ಮ ಅಂಗಡಿಯಲ್ಲಿ ನಡೆದ ಮೋಜನ್ನು ನೋಡಿದ್ದರೆ ನೀವೇನೆನ್ನುತ್ತಿದ್ದಿರೊ? ಒಂದು ಇಂಗ್ಲಿಶ್ ದಿನಪತ್ರಿಕೆಯನ್ನು ಬಿಚ್ಚಿಟ್ಟುಕೊಂಡು ನಮ್ಮ ಕನಕಾಚಾರ್ಯರ ತೇಜೋಮೂರ್ತಿಯು ಕಣ್ಣಿಗೆ ಕನ್ನಡಕ ಏರಿಸಿ ಕುಳಿತಿದೆ! ಆ ಕನ್ನಡಕದ ಹಿಂದೆ ಕಣ್ಣುಗಳು ಮುಚ್ಚಿದ್ದುವೇನೊ! ಯಾಕೆಂದರೆ, ಆಚಾರ್ಯರಿಗೆ ಇಂಗ್ಲಿಷ್ ಅಕ್ಷರಗಳೆಂದರೆ ಸಾಹೇಬರ ಚಿತ್ರ

ಗಳು–ಎನ್ನುವಷ್ಟು ಆ ಭಾಷೆಯ ಜ್ಞಾನ. ಇಷ್ಟೇಕೆ-ಒಮ್ಮೆ ಇಂಗ್ಲಿಷ ಪುಸ್ತಕ ವನ್ನು ತಲೆ ಕೆಳಗಾಗಿ ಹಿಡಿದಾಗ ‘ ಹಾಗಲ್ಲ, ಆಚಾರ್ಯರೆ; ಇದು ನೋಡಿರಿ, ಈ ತಲೆ ಕೆಳಗಾದ ಚಿತ್ರದಿಂದಾದರೂ ತಿಳಿಯಬಾರದೆ ? ’ ಎಂದಾಗ, ‘ ಸಾಹೇಬರಿಗೆ ತಲೆ ಬೇರೆ, ಕಾಲು ಬೇರೆ ಏನಪ್ಪಾ ನಮ್ಮ ಹಾಗೆ ? ತಲೆಗೂ ಚೀಲ, ಕಾಲಿಗೂ ಚೀಲ ಹಾಕುವವರು ಅವರು, ಅವರಿಗೆ ಹೇಗೆ ನಿಂತರೂ ಅಷ್ಟೆ; ಬರಿಗಾಲಿನ ನಮ್ಮ ಜನಕ್ಕ ತಲೆ ಮೇಲೆ ಕಾಲ ಕೆಳಗೆ ಇರಲೇ ಬೇಕಾ-ದದ್ದು ’ ಎಂದಿದ್ದರು! ಈಗ ಅದೇ ಆಚಾರ್ಯರು ಇಂಗ್ಲಿಷ ದಿನಪತ್ರಿಕೆ ಯನ್ನು ಮುಂದಿಟ್ಟುಕೊಂಡು, ಅಂತರಿಕಚಕ್ಷುವಿನಿಂದ ನೋಡುತ್ತಲಿದ್ದಾರೆ. ಅಷ್ಟೊಂದು ಕುತೂಹಲ ಅವರಿಗೆ– ದಿನಾಲು ಕೇಳಬರುವ ಆ ‘ಫಿನ್‌ಲಾಂಡ’ ಎಲ್ಲಿದೆ ಎಂದು. ಕೊನೆಗೆ ಆಚಾರ್ಯರು ಹತಾಶರಾಗಿ—‘ನಾನೇನಪ್ಪಾ, ನಕಾಶೆ ಏನೊ! ಅದನ್ನ ನೋಡೋದು ಹೇಗೊ! ನಿಮಗ ಯಾರಿಗಾದರೂ ಕಾಣಿಸೋದೇನು ಫಿನ್‌ಲಾಂಡ ಎಲ್ಲಿದೆ ಅಂತ ? ’ ಎಂದರು. ನಕಾಶೆಯ ಒಂದು ಮೂಲೆಗೆ ಕೈ ಹಚ್ಚಿ ಮುಂದಿದ್ದವನೊಬ್ಬ ತೋರಿಸಿದ ಆಚಾರ್ಯರು ಒಮ್ಮೆಲೆ ನಕ್ಕು ‘ ಆದೇ ಅಂತೀನಿ ! ಬೆರಳಿಟ್ಟರೆ ಮುಚ್ಚಿಹೋಗೋದು. ಈ ಅನಾಹುತ ಅರುವತ್ತು ವರ್ಷದ ಮುದುಕಗ ಹೇಗೆ ಕಾಣಬೇಕು ? ’ ಎಂದರು–ಕೂಡಲೆ, ಏನೋ ಹೊಳೆದವರಂತೆ ಪ್ರಶ್ನಾರ್ಥಕವಾಗಿ ‘ ಎಲಾ ರಂಡೇದ್ದ ! ’ ಎಂದವರೇ ನಸ್ಯದ ‘ ಗುಂಗಾಪ್ರವಾಹ ’ ದಲ್ಲಿ ಧುಮುಕಿ ಮುಳುಗಿದರು.

ಭಕ್ತಿಪರವಶರಾಗಿ ನಾವೆಲ್ಲರೂ ಮೌನತಾಳಿ ನಿಂತೆವು; ಆಚಾರ್ಯರಿಗೆ ಯಾವುದೊ ಒಂದು ಅಪೂರ್ವ ವಿಚಾರ ಹೊಳೆದಿದೆ ಎಂಬುದರ ವಾಸವೂ ನಸ್ಯದ ವಾಸದೊಡನೆಯೆ ನಮಗೆ ತಟ್ಟಿತು. ಆದರೇನು ? ಆಚಾರ್ಯರು ಆ ಸಮಾಧಿಯಿಂದಿಳಿದು ತಾವೇ ಹೇಳದಾಗಲ್ಲವೆ ನಮಗೆ ಆ ವಿಚಾರ ಯಾವುದೆಂದು ತಿಳಿಯುವುದು ? ಅದಕಾಗಿ ಅನಿವಾರ್ಯವಾಗಿ, ಆತುರರಾಗಿ ಅರೆಮುಚ್ಚಿದ ಕಣ್ಣುಗಳ, ಅರೆತೆರೆದ ಬಾಯಿಯ, ಅದೇ ಚುಟುಕರಿಸಿದ ಬೆರಳುಗಳ ಆಚಾರ್ಯರ ದೇಹಭಂಗಿಯನ್ನು ಎವೆಯಿಕ್ಕದೆ ನೋಡತೊಡಗಿ ದೆವು. ಕೊನೆಗೆ ದೇಹ ಸಡಿಲಿಸಿತು, ಕಣ್ಣು ತೆರೆದುವು; ತುಟಿ ಮುಚ್ಚಿದುವು– ಮತ್ತೆ ಬಿಚ್ಚಿದುವು; ಕನಕಾಚಾರ್ಯರ ಕರುಣಾರ್ದ್ರ ಹೃದಯಾಕಾಶದ ಬಿದಿಗೆಯ ಚಂದ್ರನಂತಹ ಮುಗುಳ್ನಗೆ ಮೂಡಿತು: ಕ್ಷಣಾರ್ಧದಲ್ಲಿ ಮತ್ತೆ

'ಎಲಾ ರಂಡೇದ್ದ!' ಎಂದು ಉತ್ತರವಾಕ್ಯವನ್ನು ಉಸುರಿದರು. ಅಷ್ಟರಲ್ಲಿ ನಾವೆಲ್ಲರೂ ಆತುರರಾಗಿ ಅಲ್ಲಿಯೆ ಕುಳಿತದ್ದು ಅವರ ಲಕ್ಷ್ಯಕ್ಕೆ ಬಂದಿತೇನೊ! 'ನನಗ ಒಂದು ಮಾತು ನೆನಪಾಯಿತು' ಎಂದರು. ಭಕ್ತವೃಂದವು ತಲೆ ದೂಗಿತು. ಆಚಾರ್ಯರು ಮುಂದುವರಿಸಿದರು—'ಮೊನ್ನೆ ನಮ್ಮ ವೆಂಕ್ಯಾ ಮತ್ತು ಸುಬ್ಯಾ ಸಾಲೆಯಿಂದ ಬರೋವಾಗ, ಕಣ್ಣು ಬಾಯಿ ಸಿಕೊಂಡು ತುಟಿ ಒಡೆದುಕೊಂಡು ಮೈ ಕೈ ಮಣ್ಣುಧೂಳಾಗಿ ಬಂದರು, ಕೇಳೋದೇನು? ಇಬ್ಬರೂ ಹಾದಿಗುಂಟ ಬಡಿದಾಡತಾನೇ ಬಂದಾರ! ಯಾಕ ಬಡಿದಾಡಿದಿರಿ-ಅಂದರೆ ಹೇಳವೊಲ್ಲರು!... ಹೇಳಲಿಕ್ಕೆ ಅಷ್ಟೊಂದು ನಾಚಿಕೆ....ಯಾಕಂದರೆ ಅವರ ಬಡಿದಾಟಕ್ಕ ಕಾರಣ ಅಂದರ ಒಂದಿಷ್ಟು ಚೂರು ಪೆನ್ಸಿಲು!' ಎಂದು ಕೈ ಬೆರಳಿನಿಂದ ತೋರಿಸುತ್ತ, 'ಈಗ ನೀವು ನಕಾಶೆಯ ಮೇಲೆ ಬೆರಳಿಟ್ಟ ಕೂಡಲೆ ಆ ಪೆನ್ಸಿಲದ ಮಾತೇ ನನಗ ನೆನಪಾಯಿತು. ಒಂದು ಚೂರು ಪೆನ್ಸಿಲಿನಷ್ಟೆ ಅದೆ ಅಲ್ಲ ಈ ಫಿನ್‌ಲಾಂಡ! ನಿಮ್ಮ ಜಗಳಬೇಡ, ಆ ಹಾಳು ಪೆನ್ಸಿಲ್ ಬೇಡ, ಅಂದವನೆ ಆ ಪನ್ಸಿಲ್ ನನ್ನ ಕಡೆಗೆ ಕಸಿದುಕೊಂಡು ಬಿಟ್ಟೆ. ಅದೇ ಹೇಳತೀನಲ್ಲ; ಅದರ ಹಾಗೇ ಈ ಖೋಡಿ ಫಿನ್‌ಲಾಂಡ ಒಂದನ್ನ ಯಾರಾದರೊಬ್ಬರು ದೊಡ್ಡವರು ಕಿಸೇಕ್ಕ ಹಾಕಿಕೊಂಡರ ಈ ಹುಡುಗಾಟದ ಜಗಳೇ ನಿಂತುಹೋಗತದ' ಎಂದರು. ಅಷ್ಟರಲ್ಲಿ ಅವರಿಗೇ ಸ್ಮರಣೆಗೆ ಬಂದು,—'ಯಾರದೊ ಹೆಸರು ಹೇಳಿದಿರಲ್ಲ?' ಎಂದರು. ರಶಿಯಾ ದೇಶವು ಫಿನ್‌ಲಾಂಡನ್ನು 'ಕಿಸೆಗೆ ಸೇರಿಸಿದೆ' ಎನ್ನಲು ಮತ್ತೆ ನಕಾಶೆಯನ್ನು ನೋಡಿ 'ಏನೂ ಅಡ್ಡಿ ಇಲ್ಲ; ನಕಾಶೆ ತುಂಬಿ ಕಾಣಿಸೋದು ರಶಿಯಾನೇ ಅಲ್ಲ?' ಎಂದು.

ಆಚಾರ್ಯರು ಬೋಲ್‌ಶೆವಿಸ್ಟ ಎನಬಹುದೆ? ನಮಗೆಲ್ಲರಿಗೂ ದಿಗಿಲು! ಅಥವಾ ಆಚಾರ್ಯರಿಗೆ ರಾಜಕಾರಣದ ಇದೊಂದೂ ತೊಡಕು ತಿಳಿಯದೆ? ಕೊನೆಗೆ ಈ ಪ್ರಶ್ನೆಯನ್ನು ಬಿಡಿಸಿಕೊಳ್ಳಲೇಬೇಕೆಂದು ಕೆಲವರು ಧೈರ್ಯದಿಂದ ಹಟತೊಟ್ಟರು. 'ರಶಿಯಾ ಅಂದರೆ ಬೋಲ್‌ಶೆವಿಸ್ಟ' ಎಂದು ಒಬ್ಬ ಗುಣುಗುಟ್ಟಿದ. ಆಚಾರ್ಯರಿಗೆ ಪೂರ್ತಿಯಾಗಿ ಕೇಳಿಸಿತೊ ಇಲ್ಲವೊ! 'ಬಲುಶೈವ ಇರವೊಲ್ಲದ್ಯಾಕ, ವೀರಶೈವ ಇರವೊಲ್ಲದ್ಯಾಕ' ಎಂದರು. ಮತ್ತೊಬ್ಬ 'ಕಮ್ಯೂನಿಸ್ಟ' ಎಂದ; ಆಚಾರ್ಯರಿಗೆ 'ಕಣ್ಮುಟ್ಟ' ಎಂದು

ಕೇಳಿಸಿತು. ಕೊನೆಗೆ ನಮ್ಮಲ್ಲಿಯ ಒಬ್ಬ ಬೃಹಸ್ಪತಿ ಉಪನ್ಯಾಸ ಕೊಡುವವ ನಂತೆ ಆರಂಭಿಸಿದ: 'ಅಲ್ಲ, ಆಚಾರ್ಯರೆ, ರಶಿಯಾ ಅಂಬೋದು ಒಂದು ಕುಲಗೆಟ್ಟ ರಾಷ್ಟ್ರ—' ಎನ್ನುವಷ್ಟರಲ್ಲಿ 'ಮ್ಲೇಚ್ಛರಿಗೆ ಮತ್ತೆಲ್ಲಿ ಕುಲ ತಂದಿ, ಅವಿವೇಕ ಮುಂಡೇದು!' ಎಂದು ಅಡ್ಡ ಮಾತನಾಡಿದರು. ಅಂತೂ ರಶಿಯಾದ ರಾಜನೀತಿಯ ತಿರುಳನ್ನು ತಿಳುಹಿಸುವ ಬುದ್ಧಿಭಾಗ್ಯ ನಮಗೆ ದೊರೆಯುವುದೆ ಸಂಶಯಾಸ್ಪದವಾಯಿತು,

ಆಚಾರ್ಯರ ಹಿರಿತನದ ಮುಂದೆ ಯಾರ ಮಾತೂ ನಡೆಯದು. ನಿಮಗೆ ಆಶ್ಚರ್ಯವೆನಿಸಬಹುದು. ಈ ಪುರಾಣಮತವಾದದ ಗೊಡ್ಡು ಗೊಂಬೆಯ ಮುಂದೆ ಕಲಿತವರಾದ ನಾವು ಕೈಮುಗಿವುದೆಂದರೆ ನಿಮಗೆ ಆಶ್ಚರ್ಯವಲ್ಲದೆ ಅಸಹ್ಯವೂ ಎನಿಸುತ್ತಿರಬಹುದು. ಆದರೇನು? ಎಷ್ಟೋ ಸಲ ನಾನು ಹೇಳಿರುವೆನಲ್ಲವೆ? ಆಚಾರ್ಯರ ಬುದ್ಧಿಸಂಸ್ಕಾರದ ಎದುರಿನಲ್ಲಿ ನಮ್ಮ ಶಿಕ್ಷಣಸಂಸ್ಕಾರಕ್ಕೆ ನಿಲ್ಲುವ ತ್ರಾಣವೇ ಇದ್ದಿರಲಿಲ್ಲ. ಅಂದಿನ ಮಾತಂತೂ ಹೋಗಲಿ, ಮುಂದೆ ಮತ್ತೊಮ್ಮೆ ಅದೇ ಸಂದರ್ಭ ದೊರೆತಾಗ 'ರಶಿಯಾದಲ್ಲಿ ಸ್ವಂತದ ಆಸ್ತಿ ಎಂಬುದಕ್ಕೆ ಅಧಿಕಾರವೇ ಇಲ್ಲ' ಎಂದಾಗ 'ಮ್ಲೇಂಚ್ಛ ರೊಳಗ ಬ್ರಾಹ್ಮಣರ ಜಾತಿ ಏನು ಇವರದು?' ಎಂದರು. ಕೆಲಹೊತ್ತು 'ಶ್ರೀಹರೀ ಇದೆಲ್ಲ ನಿನ್ನದೇ ಅಪಾ' ಎಂದರು! ನೋಡಿದಿರಾ! ಬೋಲ್ ಶೆವಿಝ್ಮಂಕ್ಕೂ ಬ್ರಾಹ್ಮಣ್ಯಕ್ಕೂ ಸಂಬಂಧವನ್ನು ಸಹಜವಾಗಿ ಕಲ್ಪಿಸಿಕೊಂಡ ಕನಕಾಚಾರ್ಯರ ಕಲಾಹೃದಯವನ್ನು? 'ಹುಡುಗರಿರಾ, ನಿಮಗ ನಗೆ ಬರೋದಲ್ಲವೆ?.. ನನಗ ಗೊತ್ತು, ನೀವು ಯಾಕೆ ನಗತಾ ಇದ್ದೀರಿ ಅಂಬೋದು..! ತಾ, ಇಲ್ಲಿ.. ಯಾರು ತೆಗೆದಿಟ್ಟರು ನನ್ನ ನಶ್ಯದ ಡಬ್ಬಿ ಯನ್ನ—?....ಎಲಾ, ಎರಡುಕಾಲಿನ ಆಂಜನೇಯಾ!.. ತಾ ಇಲ್ಲಿ ಆ ಡಬ್ಬಿಯನ್ನ....! ಎಲ್ಲಾ ಶ್ರೀಹರಿಯದು ಅನ್ನೋವಾಗ ನಶ್ಯದ ಡಬ್ಬಿ ನನ್ನದು ಅಂತ ಅನಿಸಬೇಕಂತೀಯಾ ನನ್ನ ಕಡೆಯಿಂದ?.. ಅಂದರೇನು?.. ನಾನೇ ಸ್ವತಃ ಶ್ರೀಹರಿಯ ಸೂತ್ರದ ಗೊಂಬೆ.. ನನ್ನದು ಅಂದರೆ ಕಡೆಗೆ ಅವನದೆ.. ಈಗ ಏನೋ ಹೇಳಿದೆಯಲ್ಲ— ಕಾಮಣೇಜು— ಅಂತ ಅಂದರೇನು?.. ಎಲ್ಲಾ ಶ್ರೀಹರಿಯದು ಅಂತ.. ಇರೋತನಕ ನನ್ನದು.. ಆಮ್ಯಾಲೆ ಏನಿದೆ?.. ಅದಕೇ ಹೇಳೋದಿಲ್ಲವೇ — ನಾಹಂಕರ್ತಾ, ಹರಿಃಕರ್ತಾ" ಎಂದರು; ನಸ್ಯದ ಮಂದಮಾರುತನನ್ನು ಬೀರಿದರು.

ಇದೆಲ್ಲ ಕೇಳಿದ ನಿಮಗೆ ನಮ್ಮ ಕನಕಾಚಾರ್ಯರು ನಿಜವಾಗಿಯೆ ಬೋಲ್‌ಶೆವಿಸ್ಟ್ ಎಂಬ ಭಾವನೆಯಾದೀತು. ಆದಕಾಗಿ ನಮ್ಮ ತರುಣ ಚಳವಳಿಗಾರನೊಬ್ಬನ ಅನುಭವವನ್ನು ತಮಗೆ ಹೇಳುವೆ. ಒಂದು ದಿನ ಸಾಯಂಕಾಲ, ಈ ತರುಣ ಎಲ್ಲಿಯೊ ಉಪನ್ಯಾಸ ನಡೆಯಿಸಿದ್ದನಂತೆ. ಅದನ್ನು ಮುಗಿಸಿಕೊಂಡು ಬರುವಾಗ ದಾರಿಯಲ್ಲಿ ಕನಕಾಚಾರ್ಯರು ಅವನನ್ನು ಕಂಡರು. ಮಾತಿಗೆ ಮಾತು ಬೆಳೆದು 'ನಾನೊಂದು ಉಪನ್ಯಾಸವನ್ನು ಕೊಟ್ಟೆ' ಎಂದನಂತೆ ಆ ತರುಣ; 'ಸಂಜೆಯ ಹೊತ್ತಿನೊಳಗ ಹಾಂಗ ಸಿಕ್ಕ ಸಿಕ್ಕದ್ದನ್ನ ಕೊಡಬಾರದಪಾ' ಎಂದರಂತೆ ಆಚಾರ್ಯರು. ತರುಣನಿಗೆ ಅವಮಾನವಾಯಿತೇನೊ— 'ಉಪನ್ಯಾಸ ಅಂದರೆ ಲೆಕ್ಚರ್; ಈಗ ನಾನು ಒಂದು ವಿಷಯದ ಮೇಲೆ ಭಾಷಣಮಾಡಿ ಬಂದೆ' ಎಂದನಂತೆ. 'ಏನೇನು ಹೇಳಿದೆ ಹೇಳು ನೋಡೋಣ' ಎಂದು ಸಾಹಜಿಕವಾದ ಹಿರಿಯತನದಿಂದಲೆ ಕೇಳಿದರು ಆಚಾರ್ಯರು. 'ಇಂದು ಧನವಂತರ ರಾಜ್ಯವಿದೆ, ನಮ್ಮ ಹಕ್ಕು ಗಳನ್ನೆಲ್ಲ—' ಎನ್ನುನಷ್ಟರಲ್ಲಿ ಆಚಾರ್ಯರು, ಕೈಬೆರಳುಗಳನ್ನು ಮೂಗಿನ ತುದಿಗೆ, ಕಣ್ಣನ್ನು ಅವನ ಕಡೆಗೆ ಹೊರಳಿಸಿ "ಏನಂದೆ? ಯಾರ ರಾಜ್ಯ? ಹುಡುಗಾ, ನಿನಗಿನ್ನೂ ಮದುವೆ ಆಗಿಲ್ಲ, ಆ ಮ್ಯಾಲೆ ತಿಳಿದೀತು! ಪರೀಕ್ಷಾದ ಅಭ್ಯಾಸಮಾಡು, ವರದಕ್ಷಿಣೆ ಹೆಚ್ಚು ಸಿಕ್ಕೀತು" ಎಂದು ಬೆನ್ನು ಚಪ್ಪರಿಸಿ, ತಪ್ಪದೆ ಕೂಡ ತಿರುಗಿ ನೋಡದೆ ಹೊರಟು ಹೋದರಂತೆ!

ಹಾಗೆ ನೋಡಿದರೆ ಆಚಾರ್ಯರ ಜೀವನದಲ್ಲಿ ರಾಜಕಾರಣಕ್ಕಾಗಲಿ, ಆರ್ಥಿಕದೃಷ್ಟಿಗಾಗಲಿ ಮಹತ್ತ್ವವೆ ಇಲ್ಲ. 'ರಾಜಕಾರಣಾನೇ ಆಗಲಿ— ಮತ್ತೇನೇ ಆಗಲಿ— ಎಲ್ಲಾದರ ತಳಕ್ಕೆ ನೀತಿಶಾಸ್ತ್ರ ಇದೆ ಅಂತ ನಿಮ್ಮ ಮಹಾತ್ಮಾ ಗಾಂಧೀ ಹೇಳತಾನಲ್ಲ, ಅದೇನೂ ಹೊಸದಲ್ಲ, ಆದರೆ ನಿಮ್ಮ ಮಹಾತ್ಮಗೂ ಕೂಡ ವ್ಯವಹಾರದ ಅನುಭವ ಇಲ್ಲ ಅಂಬೋ ಮಾತೇ ಸಿದ್ಧ ಆಗತದೆ' ಎಂದು ಒಮ್ಮೆ ನಮಗೆ ಹೇಳಿದ್ದರು. ಕನಕಾಚಾರ್ಯರೆಲ್ಲಿ, ಕರ್ಮಯೋಗಿಗಳೆಲ್ಲಿ?....ಎಂದು ನಿಮ್ಮಂತೆ ನಮಗೂ ಒಮ್ಮೊಮ್ಮೆ ಎನಿಸಿತ್ತು. ಆದರೆ ಆಚಾರ್ಯರ ತರ್ಕಪ್ರವಾಹ ಮಾತ್ರ ಅಗಾಧವಾದದ್ದು. 'ಇಲ್ಲಿ ನೋಡು, ಎಲ್ಲಾರೂ ಜಗತ್ತಿನೊಳಗ ಗಾಂಧಿ ಇರಬೇಕು, ಕಡೆಗೆ ಗಂಡಸರಾದರೂ ಇರಬೇಕು. ಆಗ ಆ ಶಾಸ್ತ್ರ ಈ ಶಾಸ್ತ್ರ! ಜಗತ್ತಿನ ವ್ಯವಹಾರ

ಅಂದರೆ ನೂರಕ್ಕೆ ತೊಂಬತ್ತು ಬುದ್ಧಿಸಂಸ್ಕಾರ ಇಲ್ಲದ ಹೆಂಗುಸರ ಜೋಡಿ ಸಂಸಾರ ಅನ್ಯೋನ್ಯಸ್ಥಿತಿ ಇರುವಾಗ—ಶಾಸ್ತ್ರ ನಡೆದೀತು ಹ್ಯಾಗ ನೋಡು. ಈಗ ನೋಡು—ಹಿಟ್ಲರನ ಮಾತು ಚೇಂಬರ್ಲೀನಾಗ ತಿಳಿಯೋದಿಲ್ಲ, ಇವನ ಮಾತು ಅವನಿಗೆ ಅರ್ಥ ಆಗೋದಿಲ್ಲ....ಇವರಿಬ್ಬರ ವ್ಯವಹಾರಕ್ಕೆ ಯಾವ ಶಾಸ್ತ್ರ ಹಚ್ಚುವೆ?....ಹೆಂಗುಸರ ಕೈ ಬಕ್ಕರೆ ಬಡೆಧಾಂಗ ನಮ್ಮ ಕೈ ಹೆಂಗುಸರನ್ನು ಬಡೆದರೆ—ಅಲ್ಲ, ನೀ ಏನೇ ಅನ್ನು—ನಿಮ್ಮ ರಶಿಯಾ ಆ ಬೊಟ್ಟಿನಗಲ ಫಿನ್‌ಲಾಂಡನ್ನ ಹೊಡೆದು ಹಾಕೋದೆ ಯೋಗ್ಯ ಅನಿಸ್ತದ.... ಜಗತ್ತಿನ ತುಂಬ ಇಂಥಾ ರಾಜ್ಯ ಅಂದ್ರ ಮನೆತುಂಬಿ ಹೆಂಗುಸರ ಕಾರಭಾರ ಇದ್ಧಾಂಗ ...ಅದೇ ಹುಚ್ಚು; ಮನೆ ಸುರಳೀತ ಸಾಗಬೇಕಾದರೆ ಒಬ್ಬ ಗಂಡಸು ಅದಕ್ಕ ಯಜಮಾನ ಆಗಿರಬೇಕು ...ಎಲೊ! ಎಷ್ಟು ಹೊತ್ತಾಯಿತೊ!' ಎಂದವರೆ ಎದ್ದು ಹೊತ್ತ ದೋತರ ನೆಲಕ್ಕೆ ಎಳೆಯುವ ಪರಿವೆ ಇಲ್ಲದೆ ಸಾಗಿತು ಕನಕಾಚಾರ್ಯರ ಗಾಡಿ ಸಂಸಾರ ಸ್ಟೇಶನ್ನಿಗೆ.

---

# ಕನಕಾಚಾರ್ಯರ ಕಾನ್‌ಸ್ಟಿಟ್ಯುಎಂಟ್ ಅಸೆಂಬ್ಲಿ

ಭಕ್ತನಿಗೆ ಪರಮಾತ್ಮನಿಂದ ವಿರಹಾವಸ್ಥೆ ಒದಗಿ ಆತನ ಹೃದಯವು 'ಹಂಬಾ! ಹಂಬಾ! ಎಂದು ಕರೆಯುತ್ತಲಿದ್ದೇನೆ' ಎನ್ನುವ ದೆಶೆಗೆ ಇಳಿಯುವುದು- ಎಂಬ ಮಾತು ಕೇವಲ ಕಾಲ್ಪನಿಕ, ಶಬ್ದಗಳ ಮೋಹ ಎಂದು ಹುಡುಗರಾದ ನಮಗೆ ಇದುವರೆಗೆ ತೋರುತ್ತಲಿದ್ದಿತು. 'ಇದುವರೆಗೆ' ಎನ್ನಲು ಕಾರಣವಿದೆ, ಅರ್ಥಾತ್ ಈಗ ತೋರುವುದಿಲ್ಲ ಎಂದೇ ಹೇಳಿಬಿಡೋಣ. ನಮ್ಮ ಕನಕಾಚಾರ್ಯರು ಸುಮಾರು ಒಂದು-ಒಂದುವರೆ ತಿಂಗಳು ದೇಶಾಂತರ ಪಯಣಬೆಳಸಿದಾಗ ಆದ ನಮ್ಮ ಅವಸ್ಥೆಯನ್ನು 'ಮೇಘದೂತ'ವನ್ನು ಬರೆದ ಕಾಲಿದಾಸನೆ ಬಣ್ಣಿಸಬಲ್ಲ! 'ಕುದುರೆಮೋತಿ ಇಲ್ಲ

ದಿದ್ದರೆ ನಿಮ್ಮದು —ತ್ತೆಯ ಮೋತಿಯಾಗುವುದು' ಎಂದು ಆಚಾರ್ಯರು ಹೇಳಿದ ನಗೆಯಾಟದ ರಹಸ್ಯಾರ್ಥವು ಈಗ ನಮಗೆ ಚೆನ್ನಾಗಿ ತಿಳಿಯಿತು. 'ಹರಟೆಗೆ ಬೇಕು ಹಿರಿಯರು' ಎಂದು ಆಚಾರ್ಯರದೊಂದು ತತ್ತ್ವ. ಸಾಕಷ್ಟು ಅನುಭವ, ಸಾಕಷ್ಟು ಆಲಸ್ಯ ಎರಡೂ ಅವರಿಗಿವೆಯಂತೆ! ಈ ಮಾತಿನ ಮಹತ್ತ್ವವೂ ನಿನ್ನೆಯೆ ಮಾರ್ಮಿಕವಾಗಿ ಹೊಳೆಯಿತು. ದೇಶಾಂತರ ಮುಗಿಸಿ ಬಹುದಿವಸಗಳ ನಂತರ ನಿನ್ನೆಯೆ ಆಚಾರ್ಯರು ಅಂಗಡಿಗೆ ಬಂದದ್ದು. ಬಂದವರೆ 'ಜಾಗೆ ಇದೆ ಏನಿರಿ ಒಳಗೆ?' ಎಂದರು. ನಮ್ಮೆಲ್ಲರಿಗೂ ಆಶ್ಚರ್ಯ. ಉತ್ಸಾಹದಲ್ಲಿದ್ದ ಆಚಾರ್ಯರು ತಡಮಾಡದೆ ಮಾತನ್ನು ಬೆಳಸಿದರು 'ಒಂದು ತಿಂಗಳು ರೇಲ್ವೆ ಪ್ರವಾಸಮಾಡಿ ಮಾಹಿ, ಮೊದಲು ಈ ಪ್ರಶ್ನೆ ಕೇಳುವ ರೂಢಿಬಿದ್ದಿದೆ, ನೋಡಿ!' ಎಂದು ನಕ್ಕರು.

ಕನಕಾಚಾರ್ಯರ ರೇಲ್ವೆ ಪ್ರವಾಸವೆಂದರೆ ಅದೊಂದು ಸಾಮಾಜಿಕ ಮಹಾಕಾವ್ಯ ಎಂದು ನಮಗೆ ಹಿಂದೆ ಅನೇಕ ಸಲ ತಿಳಿದುಬಂದಿತ್ತು. ಮೊದಲನೆಯ ಮಾತೆಂದರೆ, ರೈಲುಪ್ರವಾಸದ ಬಗ್ಗೆ ಅವರಿಗೆ ಕೆಲವು ಸ್ವತಂತ್ರ ವಿಚಾರಗಳಿವೆ. ತಮ್ಮಂತಹ ವೈದಿಕ ಬ್ರಾಹ್ಮಣರಿಗೆ ಪುಕ್ಕಟೆ ಪ್ರವಾಸದ ಅಧಿಕಾರವಿದೆ ಎಂದು ಅವರ ಹಟ! ನಾವು ಎಷ್ಟೋ ಸಲ ಹೇಳಿದ್ದೇವೆ ಅವರಿಗೆ, "ಇದು ಕಲಿಕಾಲ, ಇಂದಿನ ರೀತಿ-ನೀತಿ-ಶಾಸ್ತ್ರ-ಸಂಬಂಧ ಎಲ್ಲ ಬೇರೆ, ಇಂದು ಕಾಯಿದೆಯ ಇಲ್ಲವೆ ವ್ಯವಹಾರದ ದೃಷ್ಟಿಯಿಂದ ಬ್ರಾಹ್ಮಣರೂ ಅಷ್ಟೆ, ಮಿಕ್ಕವರೂ ಅಷ್ಟೆ" ಎಂದು ಮುಂತಾಗಿ. ಆದರೆ ಆಚಾರ್ಯರ ಹಟವೆ ಅಂತಹದು. ಇಂದಿಗೂ ಅವರು ತಮ್ಮ ತತ್ತ್ವವನ್ನು ಬಿಟ್ಟಿಲ್ಲ, ಅದರಂತೆಯೆ ಆಚರಿಸುವುದನ್ನು ಬಿಟ್ಟಿಲ್ಲ! 'ನೀವು ಹುಡುಗರು ಅನ್ನೋದು ಯಾಕೆ?' ಎಂದು ನಮ್ಮನ್ನೆ ಹಂಗಿಸುವರು. 'ರೈಲಿನಲ್ಲಿ ದುಡಿಯುವವರಿಗೆ ಪುಕ್ಕಟೆ ಪ್ರವಾಸ. ಯಾಕೆ? ಅವರು ಪ್ರವಾಸಮಾಡೋದು ಸ್ವಾರ್ಥಕ್ಕಾಗಿ ಅಲ್ಲ, ಪರಾರ್ಥಕ್ಕೆ. ಅಷ್ಟ್ಯಾಕೆ? "ನೀವು ಹುಡುಗರೆಲ್ಲಾ ಕೂಡಿ ನಾಟಕ ಮಾಡಿದಾಗ ಸರಕಾರೀ ಕರ ನಿಮಗಿಲ್ಲ, ಗೊತ್ತಿದೆ ಇಲ್ಲೊ? ಯಾಕೆ? ಮುಂದಿಗಾಗಿ ನೀವು ದುಡ್ಡು ಕೂಡಿಸತೀರಿ ಅಂತ. ಬ್ರಾಹ್ಮಣರು ಲೋಕಸಂಗ್ರಹಕ್ಕಾಗಿ ಸಂಚರಿಸುವರು, ಅದಕ್ಕ ಅವರಿಗೂ ಪುಕ್ಕಟೆ!' ಎಂದು ಅವರ ತರ್ಕ. ಹೀಗಾಗಿ ಆಚಾರ್ಯರು ಫ್ರೀ ಇಲ್ಲವೆ ಕನ್‌ಸೆಶನ್ ಟಿಕೆಟುಗಳಿಗಾಗಿ

ಎಂದೂ ಕಾಯುವುದಿಲ್ಲ. ಲೋಕಸಂಗ್ರಹದ ಕನ್‌ಸೆಶನ್ ಟಿಕೆಟ್ಟುಗಳಿಗೆ 'ವಾಯಿದೆ' ಎಂದರೇನು?

ಇಂದಿನ ಕಾಲದಲ್ಲಿ ಹೀಗೆ ಸಂಚರಿಸುವುದು ಅಯುಕ್ತ, ಅಪರಾಧ, ಅಭಿಮಾನಕ್ಕೆ ಕುಂದು ಎಂಬುದೊಂದು ವಿಚಾರ ಆಚಾರ್ಯರ ತರ್ಕಕ್ಕೆ ಸಹಜವಾಗಿಯೆ ಮುಟ್ಟುವುದಿಲ್ಲ. ಎಲ್ಲಿಯಾದರೂ ನಡುದಾರಿಯಲ್ಲಿ ಹೊರಕ್ಕೆ ತಳ್ಳುವರಲ್ಲ ಎಂದರೆ ಅವರು ಹೀಗೆ ಉತ್ತರ ಕೊಡುವರು: 'ಅಪ, ನೋಡು, ಮಾನಾಪಮಾನದ ಪ್ರಶ್ನೆ ಇದರಲ್ಲಿ ಯಾಕೆ? ನಾವು ಮಾಡೋದೇ ಲೋಕ-ಸಂಗ್ರಹಕ್ಕಾಗಿ. ದುಡ್ಡು ಕೊಟ್ಟವರಿಗೆ ಜಾಗೆ ಇಲ್ಲ ಎಂದರೆ ನಾನಾಗಿಯೆ ಇಳಿದುಬಿಡತೀನಿ. ಅಷ್ಟ್ಯಾಕೆ? ಮೊದಲೇ ಕೇಳತೀನಿ:— ಜಾಗೆ ಇದೆ ಏನು– ಅಂತ. ಇದ್ದರೆ ಹೋಟೆ, ಇಲ್ಲದಿದ್ದರೆ ಹೊರಹೊರಟೆ! ನಾವೇನು ನಿಂ ಗಾಂಧಿಯ ಹಾಗೆ ವೈಸರಾಯರ ಭೆಟ್ಟಿಗೆ ಹೊರಟವರಲ್ಲ! ಏನಂತಿ?'

'ಸೊಂಟದಿಂದ ಹಣ ಬಿಚ್ಚದ ಇದೂ ಒಂದು ಬನಿಯಾ ವ್ಯಾಪಾರ' ಎಂದ ನಮ್ಮಲ್ಲೊಬ್ಬ.

ಆಚಾರ್ಯರು ಛಿಟ್ಟಿಸಿ ನೋಡಿದರು, ಗಂಟಲು ಸರಿಪಡಿಸಿಕೊಂಡರು, ನಸ್ಯವನ್ನೇರಿಸಿದರು, ಆವೇಶದ ರಣಗುದುರೆಯಂತೆ ಅರಳಿಸಿದ ಮೂಗಿನಿಂದ ಮುಖ ಮೇಲೆತ್ತಿ ಮತ್ತೊಮ್ಮೆ ನೋಡಿ ಕನಿಕರದಿಂದ 'ಹುಂ' ಎಂದರು. 'ಸೊಂಟದಿಂದ ಹಣ! ಅದಕ್ಕೇ ಹೇಳೋದು ನಿಮ್ಮ ಬ್ರಾಹ್ಮಣ್ಯ ಹೋಯಿತು ಅಂತ. ನಮ್ಮಂತಹ ಬ್ರಾಹ್ಮಣರಿಗೆ ಹಣ ಎಲ್ಲಿಂದ ಬರಬೇಕು? ಈಗ ನೋಡು– ನಿಮ್ಮ ದೇಶಸೇವಾದ ಯೋಗಿಗಳು ಸಂಚಾರಮಾಡತಾರಲ್ಲ, ಅವರು ತಮ್ಮ ಹಣ ವೆಚ್ಚಮಾಡತಾರೇನು? ಯಾಕೆಂದರೆ– ತಮ್ಮದು ಅನ್ನೋದೇ ಇಲ್ಲ ಅವರಿಗೆ. ಯಾರೋ ಕೊಡತಾರ, ಹ್ಯಾಗೋ ನಡೀತ್ತದ. ಅದಕ್ಕೇ ಹೇಳಿರುವನಪಾ ಆತ "ಯೋಗಕ್ಷೇಮಂ ವಹಾಮ್ಯಹಂ" ಅಂತ. ಏನಂತಿ?'

ಏನ್ನೋದೇನು? ಅದು ಆಚಾರ್ಯರಿಗೂ ಗೊತ್ತು. ಅವರು ಗಹ-ಗಹಿಸಿ ನಕ್ಕರು. 'ಮ್ಯಾಲಿನ ಪರಮಾತ್ಮನಲ್ಲಿ ಭಕ್ತಿ ಇಲ್ಲದಿದ್ದರೂ ಮನೆಯ ಪರಮಾತ್ಮನ ಭಯಕ್ಕಾಗಿ ಹಾಗೇ ಮಾಡಬೇಕಾಗೋದು. ಸೊಂಟದಿಂದ ಹಣ ಬಿಚ್ಚದ— ಅಂತ! ಹುಚ್ಚುಂಡೇಗೌಡ! ನಾಳೆ ಮದುವೆ ಆಯ್ತು ಅಂದ್ರ

ತಿಳಿದೀತು, ಎಂದು ಗೃಹಸ್ಥಾಶ್ರಮವೆಂಬುದು ನಮ್ಮನ್ನು ಹಾರಿಸುವ ಬಿರು ಗಾಳಿ ಎಂದು ಸೂಚಿಸುವಂತೆ ನಸ್ಯವನ್ನು ಸುಯ್ಯುಡಿಸಿದರು!

ಆಚಾರ್ಯರ ಜೀವನ ಅದೊಂದು ಅದ್ಭುತರಮ್ಯ. ಅವರು ಏನು ಮಾಡಿದರೂ ನಮಗೆ ಅವರಲ್ಲಿ ಅತ್ಯಂತವಾಗಿ ಆದರಬುದ್ಧಿ ಇದೆ ಎಂದು ಅನೇಕ ಸಲ ಹೇಳಿರುವೆನಷ್ಟೆ. ಪುನರುಕ್ತಿದೋಷವೆನಿಸಿದರೂ ಅದನ್ನು ಈ ಸಂದರ್ಭದಲ್ಲಿ ಮತ್ತೊಮ್ಮೆ ಹೇಳುವೆ. ಚಳಿಗಾಲಕ್ಕೊಮ್ಮೆ ಆಚಾರ್ಯರು 'ದೇಶಾವರಿ'ಗೆಂದು ಸಂಚಾರ ಬೆಳಸುವರು. ಪರಮಾತ್ಮನ ಪ್ರೇರಣೆಯಿಂದ ಗಳಿಸುವ ಹಣದಲ್ಲಿ ತನಗಾಗಿ ಗಾಡಿಯ ವೆಚ್ಚವನ್ನು ಮಾಡಬಹುದೆ ಎಂದು ಅವರ ತಾತ್ತ್ವಿಕ ಪ್ರಶ್ನೆ. 'ಗಳಿಸಿದ ನಾಲ್ಕು ದಮಡಿಯೊಳಗೆ ಗಾಡಿಗೆ ಅಂತ ಬಡೀಬ್ಯಾಡರಿ' ಎಂದು ಹೊರಡುವಾಗ 'ಮನೆಯ ಪರಮಾತ್ಮನ' ಪ್ರೇರಣೆ! ಮುಂದೆ ಬೇಸಗೆ ಮೊದಲ್ಗೊಂಡು ಹಬ್ಬ-ಹುಣ್ಣಿಮೆಗಳು ಬರುವುವು. 'ಆಗ ಆಕೆಗೆ ಸೀರೆಯೊ ಸರಿಗೆಯೊ ಅದೊ ಇದೊ ಬೇಕಲ್ಲ? ನಮಗೇನು ಮಾಡೋದು? ನಾವು ಗಳಿಸೋದು ದುಡಿಯೋದು ಮಂದಿಗಾಗಿ— ಹೆಂಡತಿ ಅಂದರೂ ಮಂದೀನೇ ಅಲ್ಲ? ನಿನಗೇನು ತಿಳಿದೀತು ಮುಖ್ಯಪ್ರಾಣನ ದತ್ತಕ ಪುತ್ರಗೆ?' ಎಂದರು.

ಆಯಿತು. ನಮ್ಮೆಲ್ಲರಿಗೂ ನಗೆ ಬಂದಿತು, ಜೀವಕಳೆಯೂ ಬಂದಿತು, ಎಂದಿನಂತೆ ಆಚಾರ್ಯರ ಅಧ್ಯಕ್ಷತೆಯಲ್ಲಿ ಸಂಸಾರದ ಸ್ವಾರಸ್ಯಗಳನ್ನು ಸವಿಯಲು ಪ್ರಾರಂಭವಾಯಿತು.

'ಅದಾಯಿತು, ಆಚಾರ್ಯರೆ, ನೀವು ನಿಜವಾಗಿಯೆ ವೈಸ್‌ರಾಯರ ಭೆಟ್ಟಿಗೆ ಹೋಗಿದ್ದಿರಿ ಅಂತ ಸುದ್ದಿ' ಎಂದು ಯಾವನೊ ಕೆಣಕುವ ದನಿಯಲ್ಲಿ ಚುಚ್ಚಿದನು.

'ಅಂದರೆ? ದೇಶಾವರಿಯ ಬ್ರಾಹ್ಮಣಗೆ ವೈಸರಾಯ ಏನು ಒಲ್ಲಾಗಿಲ್ಲ. ನನಗೂ ಒಂದು ವಿಚಾರ ಅದೆ. ಅದೇನು? ಆ— ಕನಸಿನ ಟೊಟು-ಮೆಂಟೊ ಏನೊ ಅಂತೀರಲ್ಲ— ಒಲ್ಲಾದವರಿಗೆಲ್ಲ ವೋಟು ( Vote ) ಕೊಡೋದು, ಅದು—ಆ—'

'ಕಾನ್‌ಸ್ಟಿಟುಎಂಟ ಅಸೆಂಬ್ಲಿ'

‘ ಹಸಿ ಅಂಬಲಿಯೊ ಒಣ ಅಂಬಲಿಯೊ ನನಗೊತ್ತಿಲ್ಲ, ಯಾರೋ ಹೇಳಿದರು— ಅದನ್ನ ಬೇಡಲಿಕ್ಕೆ ನಿಮ್ಮ ಗಾಂಧಿ ವೈಸರಾಯನ ಕಡೆ ಹೋಗಿದ್ದ ಅಂತ. ಆಗ ನಾನೂ ನಿಜವಾಗಿಯೆ ಹೋಗಬೇಕು ಅಂತ ಮಾಡಿದ್ದೆ. ’

ಇದನ್ನು ಕೇಳಿ ನಗೆ ಬಂದರೆ ಕ್ಷಮ್ಯವಾದೀತಷ್ಟೆ. ಆಚಾರ್ಯರಿಗೆ ನಿಜವಾಗಿ ಈ ವಿಷಯ ಗೊತ್ತಿರುವುದೇನು, ತಿಳಿಯುವುದೇನು ? ಆದರೂ ಅವರು ಮಾತನಾಡುವ ರೀತಿ ಏನು? ಇದನ್ನು ಅವರಿಗೆ ಆಡಿ ತೋರಿಸುವ ಧೈರ್ಯ ಯಾರಿಗೆ? ನಗೆ ತಡೆಯುವಂತಿಲ್ಲ ಮಾತು ಒಡೆಯುವಂತಿಲ್ಲ ಎಂಬ ತ್ರಿಶಂಕುಸ್ಥಿತಿಯಲ್ಲಿ ನಾವು ತೊಳಲುವಾಗ ಯಾವುದರ ಹೆದರಿಕೆಯೂ ಇಲ್ಲದೆ ಆಚಾರ್ಯರು ಮಾತನ್ನು ಮುಂದುವರಿಸಿದರು.

‘ ಹಿಂದಕೊಮ್ಮೆ ನಾನು ಆಕೀನ್ನ ಕರಕೊಂಡೇ ದೇಶಾವರೀ ಸಂಚಾರಕ್ಕೆ ಹೋಗಿದ್ದೆ. ನೆನಪಾಯಿತು ಅಂತ ಹೇಳತೇನಿ. ಒಬ್ಬ ಧನವಂತ-ಮ್ಯಾಲೆ ಬಹಾಳ ಭಾವಿಕ- ಇಂಥವನ ಮನೆಗೆ ಹೋದಿವಿ. ಏನೊ-ಎಂತೊ-ನನ್ನ ವಿದ್ವತ್ತಿಗೆ ಅವ ಹುಚ್ಚಾಗಿ ಹೋದ. ‘ ನಿಮ್ಮನ್ನ ಸಂತೋಷಗೊಳಿಸಬೇಕು ಅಂತ ನನ್ನ ಬಲವಾದ ಇಚ್ಛೆ, ಆಚಾರ್ಯರೆ, ಬಡವನ ಮೇಲೆ ಅನುಗ್ರಹ ಮಾಡಿ ಬೇಕಾದ್ದನ್ನ ಕೇಳಬೇಕು’ ಎಂದ. ಮಾರಾಯನಂಥಾ ಮನೆ, ಲೆಕ್ಕ ಇಲ್ದಷ್ಟು ಜಮೀನು, ಏನಪ! ಕೇಳು ಅಂದ, ನನಗೂ ವಿಚಾರಕ್ಕೆ ಬಿದ್ದಿತು. ಆದರೆ ಹೆಂಗಸರ ಬುದ್ಧಿ ಚುರುಕು ಅಂತಾರಲ್ಲ, ಆಕೆ ತಟ್ಟನೆ ಕೇಳಿಯೆ ಬಿಟ್ಟಳು— ಇಪ್ಪತ್ತು ಸಂಡಿಗೆ-ಕುಂಬಳ ಬೇಕಂತೆ ವರ್ಷದ ಸಂಡಿಗೆ ಹಾಕಲಿಕ್ಕೆ! ಅದಕ್ಕೇ ಹೇಳ್ತೀನಿ, ಕನಸಿನ ಟೂಟಮೆಂಟಾಯ್ತು ಮನಸಿನ ಟೂಟಮೆಂಟ ಆಯ್ತು— ನೀವು ಬೇಕಾದ್ದ ಬೇಡೀರಿ, ಆದರೆ ದೇಶದೊಳಗಿನ ಈ ಸಂಸ್ಕಾರ ಇಲ್ಲದ ಮುಂಡೇವು ಸಂಡಿಗೆ ಕುಂಬಳಾನೇ ಬೇಡೋವು! ನಿಮ್ಮ ಗಾಂಧೀಗೆ ಹೇಳಿ ಬಿಡ್ಬೇಕು ಅಂತಿದ್ದೆ, ಅಪ! ನಿನ್ನಷ್ಟಕ್ಕೆ ನೀ ದೊಡ್ಡ ಮನುಷ್ಯ ಇದ್ದೀ, ಏನ್ಬೇಕು ಅದನ್ನ ಹೇಳಿಬಿಡು, ಈ ಧಡ್ಡ ರಂಡೇವನ್ನೆ ತೆಕ್ಕೆಗೆ ಹಾಕಿಕೋಬೇಡ ಅಂತ.’

ಇದನ್ನು ಕೇಳಿ ನಿಮಗೆ ಏನೆನಿಸಬಹುದೊ- ನಮಗಂತೂ ವಿಶ್ವರೂಪದ ಎದುರು ನಿಂತ ಅರ್ಜುನನಂತಾಯಿತು. ಆಚಾರ್ಯರಿಗೆ ಮಾತ್ರ ಮಾತಿನ

ಮಹತ್ತ್ವ ತಿಳಿದಿತ್ತೊ ಇಲ್ಲವೊ! ನಮ್ಮ ಮುಖದಲ್ಲಿ ಮೂಡಿದ ಭಯ-ವಿನಯ-ಭಕ್ತಿಗಳ ಛಾಯೆಯನ್ನು ನೋಡಿದರೊ ಇಲ್ಲವೊ! ಅವರ ಮಾತಿನ ಓಘ ಹಾಗೆ ನಡೆದಿತ್ತು.

'ನನಗೂ ಏನೋ ನೆನಪಾಯಿತು ಅಂತ ಹೇಳಿದೆ. ಹಾಂಗ ಕೇಳಿದರೆ ನಿಮ್ಮ ಗಾಂಧಿ ವೈಸರಾಯರ ಕಡೆ ಹೋದದ್ದೂ ನನಗ ಗೊತ್ತಿರಲಿಲ್ಲ. ಒಂದು ಕಡೆ ಮನೆಯೊಳಗೆ ಯಾರಿಲ್ಲ ಅನ್ನೋದು, ಇನ್ನೊಂದು ಕಡೆ ಮನೆ ಮಾಯೆಯ ಪ್ರಸನ್ನ ಮಾಡೋವಷ್ಟು ದೇಶಾವರಿ ದೊರಕಿಸೋದು; ಈ ದ್ವೈತದೊಳಗ ಗಾಂಧಿ-ವೈಸರಾಯ ಇಂಥಾ ಪ್ರಾಪಂಚಿಕ ವರ್ತಮಾನದ ಕಡೆ ಲಕ್ಷ್ಯ ಹೋಗೋದು ಹ್ಯಾಗೆ? ಏನೋ-ಗಾಡಿಯೊಳಗ ಜನ ಮಾತಾಡುತ್ತಿದ್ದರು. ಬಡವರ ದಸಿಂದ ಪಾಳಿ ಆದರೂ ಬೇಡಬಾರದs ಅಂತ ಒಂದು ಕಡೆ, ನಂ ಹುಡುಗರಿಗೆ ನೋಕರಿ ಬೇಡಬಾರದs ಅಂತ ಒಂದು ಕಡೆ, ನಂನ ಜಾತೀಜನ ಒಟ್ಟಾದರೆ ಸಾಕು- ಆ ಮ್ಯಾಲೆ ದೇಶ ಒಂದಾದ್ಹಾಂಗೇ-ಅಲ್ಲಿಂದ ಸ್ವರಾಜ್ಯ ಸಿಕ್ಕ್ಹಾಂಗೇ ಅಂತ ಇನ್ನೊಂದು ಕಡೆ- ಹೀಗೇ ಹೋದಹೋದಲ್ಲೆಲ್ಲ ಅದೇ ಹರಟೆ. ನನಗೂ ಆಗಾಗ ನಡುವೆ ಲೋಕಸಂಗ್ರಹಕ್ಕಾಗಿ ಇಳಿಯ ಬೇಕಾಗತಿತ್ತು ಅಂತ ಮೊದಮೊದಲು ಈ ಹರಟೆಯ ಗಾಳಿಪೇ ಹತ್ತಿರಲಿಲ್ಲ. ಅಂತೂ ಹೇಳಿದೆ- ಮದಿವೆ ಆದರೆ ತಿಳಿದೀತು ಅಂತ'

ಯಾರೋ ಒಬ್ಬರು ಗಟ್ಟಿಸಿಯೆ ನಕ್ಕರು.

'ಮತ್ತೂ ನಗತ್ತಿಯಲ್ಲೊ?' ಎಂದರು ಆಚಾರ್ಯರು ಹಿರಿತನದಿಂದ. 'ನೋಡಿದಿ ಇಲ್ಲೊ? ನಾ ನನಗಾಗಿ ದೇಶಾವರಿಗೆ ಹೋಗತೀನೆ? ನಿಮ್ಮಂಥವರನ್ನ ನಿಮ್ಮ ಕನಸಿನ ಟೊಟುಮೋಟೆನೊಳಗ ಕೇಳಿದರೆ ನಮಗ ಏನ ಬೇಕ ಅಂದರ- ಒಳಗ ಹೋಗಿ ಆಕೇನ್ನ ಕೇಳಿಬರತೀವಿ ಅನ್ನೋವವರು! ಹ ಹ! ಹುಚ್ಚುಮುಂಡೇಗಂಡ! ಅದಕೇ ಹೇಳಿದುವ ಪರಮಾತ್ಮ- ಮಾಮನುಸ್ಮರ ಯುಧ್ಯ ಚ- ಕಡಿದಾಟ ಬಿಟ್ಟಿಲ್ಲ; ರಂಡೇಮs ನಿಮಗ; ನನ್ನ ಹೆಸರಲೆ ಕಡಿದಾಡಿರಿ ಅಂತ!

# ಕನಕಾಚಾರ್ಯರ 'ಕ್ಯೂ'

ನಮ್ಮೂರು ಚಿಕ್ಕದು. ಅದಕ್ಕಾಗಿ ನಮ್ಮ ಅನುಭವ ದೊಡ್ಡದಲ್ಲ. ಉದಾಹರಣೆಗಾಗಿ, ಇಂದಿನ ಯುದ್ಧಕಾಲದ ಪರಿಸ್ಥಿತಿಯನ್ನೆ ನೋಡೋಣ. ಅದೇನೊ ಯುದ್ಧ ಒಂದು ನಡೆದಿದೆ ಎಂಬುದು ನಮಗೆ ಗೊತ್ತು, ಎಂದರೆ ಅನಿವಾರ್ಯವಾಗಿ ಪೇಟೆಯಲ್ಲಿ ಧಾರಣೆ-ಗಾಳಿಯಲ್ಲಿ ಉಟ್ಟ ದೋತರದಂತೆ-ಏರಿದಾಗ ತಿಳಿದುಬಂದಿತು. ಆದರೆ ಯುದ್ಧವೆಂದರೇನು, ಅದರಲ್ಲೂ ವಿಜ್ಞಾನ ಶಾಸ್ತ್ರದಿಂದ ಸುಧಾರಿಸಿದ ರೀತಿಯಲ್ಲಿ ನಡೆದ ಯುದ್ಧವೆಂದರೇನು ಎಂಬುದರ ಕಲ್ಪನೆ-ಪಾಪ!- ಗಾವಿಳರಾದ ನಮಗೆ ಬರುವುದು ಹೇಗೆ?

ಹೀಗೆ ನಾನಾಗಿಯೆ ಒಪ್ಪುವೆನಾದ್ದರಿಂದ ಇಂದಿಗೂ ನನಗೆ ಈ ಕಲ್ಪನೆ ಇಲ್ಲವೆಂದು ತಿಳಿಯಬೇಡಿರಿ. ಈಗ ಬಂದಿದೆ ಕಲ್ಪನೆ, ಅದನ್ನೆ ತಮಗೆ ಹೇಳ ಬೇಕೆಂದಿದ್ದೇನೆ; ಎಂದರೆ ಭರತಭೂಮಿಯ ಶಾಂತಿ-ಅಹಿಂಸೆಗಳ ಸಂಪ್ರದಾಯದ ಸುಕೃತದಿಂದ ತಮ್ಮಲ್ಲೂ ಯಾರಾದರೂ ನನ್ನಂತೆಯೆ ಗಾವಿಳರಾಗಿ ಉಳಿದಿದ್ದರೆ ಅಂತಹರಿಗಾಗಿ-ಸತ್ಯದ ಯುಗ, ಅದಕ್ಕಾಗಿ ಹೇಳುತ್ತಲಿದ್ದೇನೆ. ನಾನು ಯುದ್ಧಭೂಮಿಗೆ ಹೋದವನಲ್ಲ ಎಂಬುದನ್ನು ಮೊದಲೇ ಹೇಳುವೆ. ಇಷ್ಟೇಕೆ— ಯುದ್ಧಭೂಮಿ ಎಂದರೆ ಎಂತಹದು, ಎಲ್ಲಿರುವುದು ಎಂಬುದರ ಸ್ಪಷ್ಟಾರ್ಥವೆ ನನಗಿಲ್ಲ. ನಾನು ಹೋದದ್ದು—ನಾನೆಷ್ಟರವ ಹೋಗಲಿಕ್ಕೆ? ನಮ್ಮೆಲ್ಲರಿಗೆ ಹಿರಿಯರಾದ ಕನಕಾಚಾರಿಯವರು ತಮ್ಮ ಜೊತೆಗೆ ಬರಬೇಕೆಂದು ಒತ್ತಾಯಪಡಿಸಿ ನನ್ನನ್ನು ಮುಂಬಯಿ ಪಟ್ಟಣಕ್ಕೆ ಕರೆದುಕೊಂಡು ಹೋಗಿದ್ದರು. ಅಲ್ಲಿ ನಾವು ಎರಡು-—ಮೂರು ದಿವಸ ಇದ್ದಿರಬಹುದು (ಎಷ್ಟೆಂಬುದರ ಕಲ್ಪನೆ ಮಸುಕುಮಸುಕಾಗಿದೆ), ಅಷ್ಟರಲ್ಲಿ – ಅಬ್ಬ!– ಯುದ್ಧವೆಂದರೆ ಅದೆಂತಹ ಭಯಂಕರವಾದ ಪ್ರಸಂಗ ಎಂಬುದರ ಚಿತ್ರ ಕಣ್ಣು ಕಟ್ಟಿತು.

ಈಗ ವಿಚಾರ ಮಾಡಿ ನೋಡಿದರೆ ಪ್ರವಾಸದ ಪ್ರಾರಂಭದಲ್ಲಿಯೆ ನಮಗೆ ಯುದ್ಧ ಪರಿಸ್ಥಿತಿ ತಿಳಿದು ಬಂದಿತು (ಹಾಗೆಂದು ಆಗ ಮಾತ್ರ ತಿಳಿದಿರಲಿಲ್ಲ) ಎಂದು ಹೇಳಬಹುದು. ಕನಕಾಚಾರ್ಯರಿಗೆ ಒಂದು ಗೂಢ. ಇಂಗ್ಲಿಷರಿಗೂ, ಜರ್ಮನರಿಗೂ ಯುದ್ಧ ನಡೆದಿದೆ ಎಂದು ಅವರು ಯಾವಾ-

ಗಲೂ ನಮಗೆ ಹಿರಿತನದಿಂದ ಹೇಳುತ್ತಿದ್ದರು; ನಮ್ಮ ಕಲ್ಪನೆಯೂ ಹಾಗೇ ಇದ್ದಿತು. ಅದಕಾಗಿಯೆ ಹೆಗಲಮೇಲೆ ಗಂಟಿದ್ದರೂ ಮುಖವನ್ನೆತ್ತಿ ನೋಟ ದಿಂದಲೆ ಆಚಾರ್ಯರಿಗೆ ಪ್ರಶ್ನೆ ಮಾಡಿದೆ. ಅವರು ಒಂದು ನಿಮಿಷ–ಒಂದೇ ನಿಮಿಷ–ದಿಗ್ಭ್ರಾಂತರಾಗಿ ನೋಡಿದರು. ಒಂದು ಕೈಯಲ್ಲಿ ಕೋಲು, ಇನ್ನೊಂದರಲ್ಲಿ ತಂಬಿಗೆ–ರವಿವರ್ಮನ ಚಿತ್ರಗಳಲ್ಲಿಯ ಋಷಿಯಂತೆ–ತೇಜೋಭರಿತರಾದ ಆಚಾರ್ಯರ ಆಜ್ಞೆಯನ್ನೆ ನಾನು ನಿರೀಕ್ಷಿಸುತ್ತಲಿದ್ದೆ; ತಟ್ಟನೆ ಅವರಿಗೆ ನನ್ನ ಪ್ರಶ್ನೆ ಹೊಳೆಯಿತು, ತಟ್ಟನೆ ನೋಟದಿಂದ ಉತ್ತರ ವನ್ನೂ ಮಿಂಚಿದರು. ಆ ನೋಟದಿಂದ ಸ್ಫೂರ್ತಿಗೊಂಡ ನಾನು ಇರಿಯುವ ಹೋರಿಯಂತೆ ತಲೆಬಾಗಿಸಿ ಮುಂದೆ ಧುಮುಕಿದೆನು. ಬಾಲವನ್ನು ಮುರಿದು ಹುರಿದುಂಬಿಸುವವರಂತೆ ಆಚಾರ್ಯರು ನನ್ನ ಹಿಂದೆಯೆ ಇದ್ದರು. ಎರಡು-ಮೂರು ನಿಮಿಷ ಕಳೆದುದು ಹೇಗೆ ಎಂಬುದನ್ನು ಇಂದಿಗೂ ಹೇಳಲಾರೆ. ಒಂದು ಕ್ಷಣ ಕಾಲು ನೆಲವನ್ನೆ ಬಿಟ್ಟುವು, ಆದರೂ ನಾನು ಬೀಳಲಿಲ್ಲ. ಒಂದು ಕ್ಷಣ ತಲೆಗೆ ಸಿಡಿಲು ಬಡೆದಂತಾಯಿತು, ಆದರೆ ಹೆಗಲಿನಿಂದ ಗಂಟು ತಲೆಗೆ ಮಾತ್ರ ಸರಿದಿತ್ತು. ಮರುಕ್ಷಣ ಕೆಳಗಿನ ನೆಲ ಸರಿಯತೊಡಗಿತು; ತಲೆ ತಿರುಗಿರಬಹುದೆ ಎಂದು ಹಿಂದೆಯೆ ನಿಂತ ಆಚಾರ್ಯರನ್ನು ನೋಡಿದೆ; ಅವರು ವಿಜಯಮಾಲೆಯಂತಹ ಮುಗುಳ್ನಗೆಯನ್ನು ತಳೆದಿದ್ದರು; ಮತ್ತೆ ಕೆಳಗೆ ನೋಡಿದೆ; ನೆಲವು ಸರಿಯುತ್ತಿತ್ತಷ್ಟೆ ಅಲ್ಲ, ವೇಗದಿಂದ ಓಡುತ್ತಿದ್ದಿತು! ಆಚಾರ್ಯರು ನನ್ನ ಬೆನ್ನು ತಟ್ಟಿದರು; ಮುಖ ತಿರುಗಿಸಿ ನೋಡಿದೆ; ಅದೇ ಮುಗುಳ್ನಗೆಯಿಂದಲೆ 'ನೋಡಿದಿಲ್ಲೊ ? ಅಂತೂ ಜಾಗಾ ಸಿಕ್ಕಿತು !' ಎಂದರು. ಓಹೊ! ಆಗ ನನ್ನ ಸ್ಮರಣೆಗೆ ಬಂದಿತು, ಇದುವರೆಗಿನ ನನ್ನ ಅನುಭವವೆಂದರೆ— ನಾನು ಟ್ರೇನಿನಲ್ಲಿ ಬಂದಿದ್ದೇನೆ! ಗಾಡಿಯಲ್ಲಿ ನಮಗೆ ಜಾಗೆ ಸಿಕ್ಕಿದೆ ಎಂದು ಕನಕಾಚಾರ್ಯರು ನಿಜ ಪರಿಸ್ಥಿತಿಯನ್ನು ತಿಳುಹಿಸಿ-ದ್ದಿಲ್ಲವೆಂದರೆ ನಾನು ಏನು ಮಾಡುತ್ತಿದ್ದೆನೊ!

ಮನುಷ್ಯನಿಗೆ ಎರಡು ಕಾಲ್ಗಳಿವೆ ಎಂಬ ಮಾತಿನ ಅನುಕೂಲತೆಯೂ ಅಭಿಮಾನವೂ ಅಂದು ಟ್ರೇನಿನಲ್ಲಿ ಹೊಯ್ದಾಡುವಾಗ ನನಗೆ ಬಂದಿತು. ಮಾನವನಿಗೆ ರೈಲು ಪ್ರವಾಸ ತಪ್ಪಿಲ್ಲ ಎಂಬ ಮುಂದಾಲೋಚನೆಯಿಂದಲೆ ದೇವನು ನಾಲ್ಕರಿಂದ ಕಾಲ್ಗಳನ್ನು ಎರಡಕ್ಕೆ ಇಳಿಸಿರಬಹುದಲ್ಲವೆ?

ಅದಕ್ಕಾಗಿಯೆ ಆ ಭಗವಂತನನ್ನು ನಾವು ಸರ್ವಜ್ಞ ಎನ್ನುತ್ತೇವೆ. ಎರಡೇ ಕಾಲ್ಗಳಿದ್ದುದರಿಂದ ಆದಷ್ಟು ಕಡಮೆ ಜಾಗೆಯಲ್ಲಿ---ಒಮ್ಮೊಮ್ಮೆ ಬದಿಗೆ ನಿಂತವರ ಕಾಲ್ಬೆರಳ ಮೇಲೆಯೆ---ಇಡಿಯ ನಮ್ಮ ದೇಹವನ್ನು ನಿಲ್ಲಿಸ ಬಹುದು! ಎಂತಹ ಅನುಕೂಲ! ಅದರಂತೆ ನನಗೆ ಅಭಿಮಾನವೂ ಎನಿಸಿತು. ನಾಲ್ಕು ಇಲ್ಲವೆ ಹೆಚ್ಚು ಕಾಲ್ಗಳಿದ್ದ ಪಶುಕೀಟಕಗಳಿಗೆ ತಮ್ಮ ದೇಹದ ತೂಕವನ್ನು ಸರಿಹಿಡಿದು ನಿಲ್ಲಿಸುವುದು ಏನೂ ಕಷ್ಟವಲ್ಲ. ಆದರೆ, ಹೊಯ್ದಾಡುವ ಟ್ರೇನಿನಲ್ಲಿ, ಎರಡೇ ಕಾಲ್ಗಳ ಮೇಲೆ ಇಡಿಯ ದೇಹದ ಜೋಲಿಯನ್ನು ಸರಿ ಹಿಡಿಯುವುದೆಂದರೆ ಎಂತಹ ನುರಿತ ಡೊಂಬನಿಗೂ ಶಕ್ಯ ವಾಗಲಿಕ್ಕಿಲ್ಲ. ಆದರೆ ಅಂದಿನ ದಿನ ಕನಕಾಚಾರ್ಯರೂ ನಾನೂ ಆ ಡೊಂಬರಾಟವನ್ನು ಯಶಸ್ವಿಯಾಗಿ ನಡೆಸಿದೆವು. ಅದಕಾಗಿ ಅಭಿಮಾನ! ಕನಕಾಚಾರ್ಯರು ಮಾತನಾಡುತ್ತಿರುವಂತೆ ಕಂಡಿತು.

'ನೋಡಿದಿಲ್ಲೊ?' ಎಂದರು.

ಆಚಾರ್ಯರ ಮಾತನಾಡುವ ಪದ್ಧತಿ ಯಾವಾಗಲೂ ಹೀಗೆಯೆ ಕೇಳುವವರ ಕುತೂಹಲ ಕೆಣಕುವವರೆಗೆ ಸ್ಪಷ್ಟವಾಗಿ ಮಾತನ್ನೆ ಆಡು ವಂತಿಲ್ಲ. ಅದಕಾಗಿ ನಾನು ತುಸು ಸಿಟ್ಟಿನ ದನಿಯಲ್ಲಿಯೆ

'ಏನೊ—ಏನೊ! ನನಗಂತೂ ಇದೇನಾಯ್ತು ತಿಳಿದೇ ಇಲ್ಲ' ಎಂದೆ

'ಯುದ್ಧ' ಎಂದರು ಆಚಾರ್ಯರು; ನಾನು ಕೇಳಬೇಕೆನುವಷ್ಟರಲ್ಲಿ 'ಯುದ್ಧ, ಅದಕ್ಕs ಇದೆಲ್ಲಾ' ಎಂದರು

ನನಗೆ ಇನ್ನೂ ತಿಳಿಯಲಿಲ್ಲ. 'ಯುದ್ಧ! ಯುದ್ಧ ಎಲ್ಲಿ, ಇದು ಏನು, ಒಂದಕ್ಕೊಂದು ಸಂಬಂಧ ಏನು, ಆಚಾರ್ರೆ?' ಎಂದೆ.

ಆಚಾರ್ಯರು ಮತ್ತೆ ಆ ಕೆಣಕಿಸುವ ನಗೆಯನ್ನು ನಕ್ಕರು. 'ಯುದ್ಧ ಅಂದ್ರೆ ಇಂಗ್ಲಿಶ—ಜರ್ಮನ್ರ ನಡುವೆ ಅಂತ, ಹೌದಲ್ಲೊ?' ಎಂದರು.

ನಾನು ತಲೆತೂಗಬೇಕೆಂದೆ, ಹತ್ತಿರದವನ ತಲೆಯೆ ತೂಗಿತು, ಆದರೂ ಆಚಾರ್ಯರು ನನ್ನ ಅಭಿಪ್ರಾಯವನ್ನು ತಿಳಿದುಕೊಂಡವರಂತೆ ಮುಂದೆ ಸಾಗಿಸಿದರು ತಮ್ಮ ಜ್ಞಾನ ಲಹರಿಯನ್ನು.

'ಅದೇ ನಾವು ತಪ್ಪಿದ್ದು, ನೋಡು. ಆದರೆ ಈಗ ತಿಳಿಯಿತಿಲ್ಲೊ ನಿನಗೆ? ಯುದ್ಧ ನಡೆದದ್ದು ನಿಜ. ಆದರೆ ಅದು ಇಂಗ್ಲಿಶ—ಜರ್ಮನ್ರ

ನಡುವೆ ಅಲ್ಲ. ನಮ್ಮನಮ್ಮೊಳಗೇ. ಒಳಗೆ ಕೂತವರಿಗೂ ಹೊರಗಿನಿಂದ ಬರೋವ್ರಿಗೂ ನಡೆದ ಯುದ್ಧ ?

'ಅಂದ್ರೆ ಇಷ್ಟೊತ್ತು ಸ್ವತಃ ನಾವೇ ಯುದ್ಧ ಮಾಡಿ ಒಳಗೆ ಬಂದೆವು ಅಂತೀರೊ ಏನು!' ಎಂದು ನಾನು ಚಕಿತನಾಗಿ ಕೇಳಿದೆ.

ಜ್ಞಾನದಿಂದ ತುಂಬಿ ಭಾರವಾಗಿದೆ ಎಂದೊ, ಇಲ್ಲವೆ ಸ್ಥಳ ಸಂಕೋಚದ ಮೂಲಕವೊ, ಆಚಾರ್ಯರ ತಲೆ ನಿಂತಲ್ಲಿಯೆ ತೂಗಿತು ಇಷ್ಟರಲ್ಲಿ ಕಾಲು ಬದಲಾಯಿಸಬೇಕಾಗಿ ಬಂದಿತು, ಎಂದರೆ ಇದುವರೆಗೆ ನೆಲಕ್ಕೆ ಮುಟ್ಟಿದ ಕಾಲನ್ನು ಮೇಲೆತ್ತಿ, ಮೇಲೆತ್ತಿದ್ದ ಕಾಲನ್ನು ಕೆಳಕ್ಕೂರಿದೆ. ಕನಕಾ-ಚಾರ್ಯರು ಮಾತ್ರ ಕ್ರಮೇಣ ಕೈಗೋಲನ್ನು ಮೂರನೆಯ ಕಾಲಿನಂತೆ ಉಪಯೋಗಿಸುತ್ತ ವಾಮನನಂತೆ ವ್ಯಾಪಿಸತೊಡಗಿದರು.

ಹೊತ್ತುಗಳೆದಂತೆ ಸುತ್ತಲೂ ಪರಿಚಯವಾಗತೊಡಗಿತು; ನಾವು ಒಳಹೊಕ್ಕಾಗ ನೋಡಿದ್ದಕ್ಕಿಂತ ಇನ್ನೂ ಎಷ್ಟೋ ಜನರು ಆ ಕಂಪಾರ್ಟ ಮೆಂಟನಲ್ಲಿದ್ದುದು ಕಂಡುಬರತೊಡಗಿತು. ಇದಕ್ಕೆ ಕಾರಣವೆಂದರೆ, ಮೊದಲು ಮೇಲೆ ನಿಂತವರನ್ನಷ್ಟೆ ನೋಡಿದ್ದೆ. ಗಾಡಿ ಅಂಕಡೊಂಕಾಗಿ ಸಾಗುವಾಗ ಇವರ ಕೆಳಗೆ ಕುಳಿತಿದ್ದವರ ಮುಖವೂ ಸ್ವಲ್ಪ ಸ್ವಲ್ಪ ಪ್ರಕಟವಾಗುತ್ತಿದ್ದಿತು. ಗಾಡಿಯೊಳಗೆ ಕುಳಿತವರ ಟಿಕೆಟ್ಟಿಗೂ, ಈ ಕುಳಿತವರ ಹೆಗಲ ಮೇಲೆ ನಿಂತವರ ಟಿಕೆಟ್ಟಿಗೂ ದರದಲ್ಲಿ ವ್ಯತ್ಯಾಸವಿರಬಹುದೆ ಎಂಬ ಕುತೂಹಲ ನನಗೆ. ಮುಂಬಯಿಯಿಂದ ಮರಳಿ ಬರುವಾಗ ಈ ಟಿಕೆಟ್ಟಿನದೊಂದು ಮೋಜು ತಿಳಿಯಿತು. ನನಗೆ (ತಿರುವುಮುರುವಾಗಿ ಹೇಳುವುದಕ್ಕೆ ಕ್ಷಮೆ ಇರಲಿ). ಮುಂಬಯಿಗೆ ಹೊರಡುವ ಮುಂಚೆಯೆ ಆಚಾರ್ಯರಿಗೆ ಅಲ್ಲಿ ದೂರದ ಆಪ್ತರೊಬ್ಬರಿದ್ದುದು ಸ್ವಪ್ನದರ್ಶನವಾಗಿತ್ತು. ಮುಂಬಯಿಯನ್ನು ಬಿಡುವ ದಿವಸ ನಾವು ಮನೆಯಿಂದ ಹೊರಬಿದ್ದೆವು—ಅಥವಾ ಹೊರಬೀಳುವವರಿದ್ದೆವೆನ್ನೋಣ. ಯಾಕೆಂದರೆ ಹೊಸ್ತಿಲದ ಹೊರಗೆ ಕಾಲಿಡುವಷ್ಟರಲ್ಲಿಯೆ ಪೋಲೀಸ ನಮ್ಮನ್ನು ತಡೆದ. ಆಚಾರ್ಯರು ದೂರ ಸರಿಯುವುದನ್ನು ಕಂಡು ಅವರನ್ನು ಹಿಡಿಯಹೋಗಲು — 'ಮುಟ್ಬ್ಯಾಡ ರಂಡೇಗಂಡ! ದೇವರಿದೆ ಗಂಟಿನೊಳಗೆ' ಎಂದರು. ಆದರೆ ಆಚಾರ್ಯರಿಗೂ ದೂರ ಸರಿಯಲು ಹೆಚ್ಚು ಜಾಗೆ ಇರಲಿಲ್ಲ, ಮನೆಯ ಮುಂದೆ ಅಷ್ಟೊಂದು ಜನರ ಸಂದಣಿ.

'ನೀವು ಎಲ್ಲಿ ಹೋಗುವವರು?' ಎಂದ ಪೋಲೀಸ. .

'ಗಂಟೆ ಹೊತ್ತೀವಿ, ಕಾಣೋದಿಲ್ಲ?' ಎಂದರು ಆಚಾರ್ಯರು.

'ಗಂಟು ನಮ್ಮದೇ ಅಂತ ಹೇಳಿರಿ' ಎಂದು ನಾನು ಪಿಸು ದನಿಯಲ್ಲಿ ಸೂಚಿಸಿವೆ.

'ನಮ್ಮದೆ ಅಂದರೆ? ಮುಂದಿಯ ಗಂಟು ಹೊತ್ತು ಸ್ಟೇಶನಿಗೆ ಹೋಗತೀವೇನೋ!' ಎಂದು ನನ್ನ ಮೇಲೆಯೆ ಕಣ್ದೆರೆದರು.

'ಸ್ಟೇಶನ? ಸ್ಟೇಶನಿಗೆ ಹೋಗತೀರಾ?' ಎಂದನು ಪೋಲೀಸಸಾಹೇಬ.

ಇಷ್ಟರಲ್ಲಿ ನಾಲ್ಕಾರು ಜನ ಬಂದವರೆ ನಮ್ಮನ್ನು ಬದಿಗೆ ಸರಿಸಿ, ಮತ್ತೆ ನಮ್ಮ ಹತ್ತಿರದಲ್ಲಿಯೆ ನಿಂತುಕೊಂಡರು 'ಸ್ಟೇಶನಿಗೆ ಹೋಗೋದಾದರೆ— ಇಲ್ಲಿಯೆ ನಿಂತುಬಿಡಿಂ?'

ಪೋಲೀಸನ ಮಾತಿಗೆ ಉತ್ತರ ಕೊಡುವಷ್ಟರಲ್ಲಿ ಇನ್ನೆರಡು ಜನ ನಮ್ಮನ್ನು ಬದಿಗೆ ಸರಿಸಿತು.

'ನಡೀಬಾರದೆ ಹುಚ್ಚ್ರಂಡೇದ್ದ!' ಎಂದು ನನ್ನ ಮೇಲೆಯೆ ಆಚಾರ್ಯರು ಹರಿಹಾಯ್ದರು. 'ಹರೇದ ಹುಡುಗ, ಮುಂದ್ಹೋಗಿ ಟಿಕೀಟು ಕೊಂಡಾನೂ ಅಂದ್ರೆ—?

ನಾನು ಹೊರಡುವಷ್ಟರಲ್ಲಿ ಪೋಲೀಸನು ನನ್ನನ್ನು ಬಿಗಿಯಾಗಿ ತಡೆದು– 'ಟಿಕೆಟ್ ಬೇಕಾದರೆ ಇಲ್ಲಿಯೆ ನಿಲ್ಲಿರಿ' ಎಂದನು. ನಮ್ಮ ಬದಿಗೆ ಸಾಲಾಗಿ ನಿಂತ ಜನಸಂದಣಿಯನ್ನು ತೋರಿಸುತ್ತ 'ಇವರೆಲ್ಲರಿಗೂ ಟಿಕೆಟ್ಟೇ ಕೊಳ್ಳುವುದದೆ. ಗಲಾಟೆ ಆಗಬಾರದೂ ಅಂತ ಸ್ಟೇಶನದಿಂದ ಇಲ್ಲಿಯ ತನಕ ಸಾಲಾಗಿ ನಿಂತಾರೆ' ಎಂದನು! ಅದಕೇನೋ ಇಂಗ್ಲಿಶಿನೊಳಗೆ ಕ್ಯೂ (=ಬಾಲ) ಅಂತಾರಂತೆ!

'ಇದೇನು ಬಾಲ ಆಚಾರ್ರೆ' ಎಂದು ಪೆಚ್ಚನಂತೆ ನಾನು ನಿಂತೆ

'ಇಷ್ಟು ಜನ ಹುಚ್ಚ ಆದಮೇಲೆ ಬಾಲ ಮೂಡದೇ ಬಿಟ್ಟೀತ?' ಎಂದರು ಆಚಾರ್ಯರು. ಅಂತೂ ಈ ಮೋಜನ್ನು—ಅಥವಾ ಅಡ್ಡದಾರಿ ಹಿಡಿದು ಕತೆ ಬೆಳೆಯಿತೇನೊ? ಬೇಜಾರವಿಲ್ಲದಿದ್ದರೆ ಇನ್ನೊಮ್ಮೆಗೆ ಮುಂದೆ ಸಾಗಿಸುವೆ.

---

# ಜಾಣತನದ ಪ್ರದರ್ಶನ

ಈಗ ನೋಡಿದಲ್ಲೆಲ್ಲ ಪ್ರದರ್ಶನಗಳ ಹುಚ್ಚು; ಹಾಗೆಂದರೆ ಯಾರಾದರೂ ನಿದ್ದೆಗಣ್ಣಿನಲ್ಲಿ ಓದುವಾಗ 'ಹುಚ್ಚಿನ ಪ್ರದರ್ಶನ' ಎಂದು ಓದಬಹುದು, ಆದರೆ ಓದುಗರ ನಿದ್ದೆಗೆ ಸಂಪಾದಕರು—ಅಲ್ಲಲ್ಲ— ನಾವು ಜವಾಬ್ದಾರರಲ್ಲ ಎಂದು ಮೊದಲೇ ಹೇಳಿಡುವೆವು. ಸಮ್ಮೇಳನಗಳಲ್ಲಿ, ನಾಡಹಬ್ಬಗಳಲ್ಲಿ, ಹುಣ್ಣಿಮೆ – ಹಬ್ಬಗಳಲ್ಲಿ, ಸಂಕ್ರಾಂತಿ–ಸಮಾರಾಧನೆಗಳಲ್ಲಿ ಪ್ರದರ್ಶನವನ್ನು ಏರ್ಪಡಿಸದಿದ್ದರೆ ಕಾರ್ಯಕ್ರಮವೆ ಪೂರ್ತಿಯಾದಂತೆನಿಸುವುದಿಲ್ಲ. 'ಪ್ರದರ್ಶನ' ಎಂದರೇನು? ತೋರಿಸುವುದು. ಕೆಲಸ ಮಾಡುವುದನ್ನು. ತೋರಿಸುವುದೊ? ಮಾಡುವ ಕೆಲಸವನ್ನು ತೋರಿಸು – ಛೆ, ಲೇಖಕರೆ ನಿದ್ದೆ ಹೋದಂತಿರುವ ಈ ಶಬ್ದಾಡಂಬರವನ್ನು ಬಿಟ್ಟುಬಿಡೋಣ. ಅಜ್ಞರಿಗಾಗಿ, ಸಾಮಾನ್ಯ ಮನುಷ್ಯರಿಗಾಗಿ ಕೆಲವು ಮಹತ್ತ್ವದ ಸಂಗತಿಗಳ, ಆವಶ್ಯಕ ವಿಷಯಗಳ ಮಾದರಿಗಳನ್ನು ಮುಂದಿಟ್ಟು ಜ್ಞಾನವನ್ನು ಕೊಡುವುದೆ ಪ್ರದರ್ಶನದ ಉದ್ದೇಶವಲ್ಲವೆ? ಉದಾಹರಣೆಗಾಗಿ ಥರ್ಡ್‌ಕ್ಲಾಸ್ ಪ್ರವಾಸದ ಪ್ರದರ್ಶನ-???

ನಗಬೇಡಿರಿ, ದಯವಿಟ್ಟು ಥರ್ಡ್‌ಕ್ಲಾಸ್ ಪ್ರವಾಸವೆಂದರೆ ನಮ್ಮ ದೇಶದಲ್ಲಿ ಎಂತಹ ಮಹತ್ತ್ವದ ಸಂಗತಿಯಾಗಿದೆ, ಎಂತಹ ಆವಶ್ಯಕ ವಿಷಯವಾಗಿದೆ? ಭಾರತದಲ್ಲಿ, ಕಲಿಯುಗದ ಭರತವರ್ಷದಲ್ಲಿ ಜನ್ಮ ತಾಳಿದ ಮಾನವನಿಗೆ ಥರ್ಡ್‌ಕ್ಲಾಸ್ ಪ್ರವಾಸವು ಬಿಟ್ಟದ್ದಲ್ಲ. ಆದಕ್ಕಾಗಿಯೆ ಇಂದು ಪರಮಾತ್ಮನು ನಮ್ಮ ದೇಶದಲ್ಲಿ ಅವತಾರ ತಾಳಲು ಹಿಂದುಮುಂದು ನೋಡುತ್ತಿದ್ದಾನೆ. ಇರಲಿ, ಇಷ್ಟೊಂದು ಮಹತ್ತ್ವದ ಮತ್ತು ಆವಶ್ಯಕವಾದ ಈ ಥ. ಕ್ಲಾ. ಪ್ರವಾಸವು ಸುಲಭವಾದುದಲ್ಲ, ಅಭ್ಯಾಸ ಮಾಡದೆ ಬರುವಂತಹದಲ್ಲ, ತಪವಂಗೈಯದೆ ಸಾಧಿಸಬವಂತಹದಲ್ಲ ಥ. ಕ್ಲಾ. ಪ್ರವಾಸಿಗನು ಟಿಕೆಟ್ಟನ್ನು ಕೊಂಡುಕೊಳ್ಳುವುದು ಹೇಗೆ ಮತ್ತು ಎಲ್ಲಿ? ಮೊದಲನೆಯ ಎರಡನೆಯ ಕ್ಲಾಸಿನವರಿಗೆ 'ಸುಸ್ವಾಗತಂ, ಇಲ್ಲಿ ಟಿಕೆಟ್ಟನ್ನು ಕೊಳ್ಳುವ ಅನುಗ್ರಹ ಮಾಡುವಿರಾ?' ಎಂದು ಬರೆದು ತೋರಿಸಿರುತ್ತಾರೆ. ಜನರ ಗಲಾಟೆ ಇದ್ದಲ್ಲಿ ಥ. ಕ್ಲಾ. ಟಿಕೆಟ್ಟು ದೊರಕುವುದೆಂಬುದು ಸಾಮಾನ್ಯ ನಿಯಮ. ಅದರಂತೆ ನಾನೂ ಒಮ್ಮೆ ಆಚರಿಸಿದ್ದೆ, ಜನರ ಗಲಾಟೆಯಲ್ಲಿ

ಧುಮುಕಿದೆ; ಟ್ರೇನು ಬಂದಿತು, ನುಗ್ಗಿದೆ; ಟ್ರೇನು ಹೊರಟಿತು, ಹೌಹಾರಿ ನಿಂತೆ! ಟಿಕೆಟ್ಟು ದೊರೆಯಲಿಲ್ಲ! ಇಷ್ಟರಲ್ಲಿ ಜನಸಂದಣಿಯು ಸಡಿಲಾಯಿತು. ನೋಡಿದರೆ ಅಲ್ಲಿ ಟಿಕೆಟ್ಟು ಸಿಕ್ಕುವ ಸ್ಥಳವಿದ್ದಿರಲಿಲ್ಲ— ಚಹಾ ಚಿವುಡಾಧಿಪತಿ ಮಾರವಾಡಿಯ ಅಂಗಡಿ! ಈ ಅನುಭವವಾಗಲಿ, ಯಾವನೊ ಒಬ್ಬನು ಉಡುಪಿಗೆ ಹೋದಾಗ ಕನಕನ ಕಿಂಡಿಯನ್ನು ನೋಡಿ 'ಒಂದು ಹುಬ್ಬಳ್ಳಿ ಟಿಕೆಟ್ಟು' ಎಂದು ಅಭ್ಯಾಸವಶದಿಂದ ಹಣವನ್ನು ಒಗೆವ ಅನುಭವವಾಗಲಿ ಈ ಕೆಲಸ ಸುಲಭವಲ್ಲವೆಂಬುದನ್ನು ತೋರಿಸಿಕೊಡುತ್ತಿವೆ. ಇನ್ನು ಟಿಕೆಟ್ಟನ್ನು ಹೇಗಾದರೂ ಸಂಪಾದಿಸಿ ಸ್ಟೇಶನಿನ ಒಳಗೆ ನುಗ್ಗಿ ಟ್ರೇನು ಬಂದು ನಿಂತಾಗ ಸ್ಥಳವನ್ನು ಹುಡುಕುವುದೆಂದರೆ ಅದೇನು ಸಾಮಾನ್ಯ ಕೆಲಸವೆ? ಹೆಂಗಸರ ಗಾಡಿಯೊಂದನ್ನು ಬಿಟ್ಟರೆ ಮತ್ತೆಲ್ಲೂ ಸ್ಥಳವೆ ಇಲ್ಲ—ಇಲ್ಲ ಎಂದರೆ ನಿಜವಾಗಿಯೆ ಇಲ್ಲ ಎಂದಲ್ಲ. ಸ್ಟೇಶನ ಮಾಸ್ಟರರಾಗಲಿ, ಗಾರ್ಡನಾಗಲಿ 'ಬೇಕಾದಷ್ಟು ಸ್ಥಳವಿದೆ' ಎಂದು ಹೇಳುವರು. ಇದೆ ಸ್ಥಳ, ಆದರೆ ಅದನ್ನು ಗಳಿಸುವ ಯೋಗ್ಯತೆ ಬೇಕು. ಯುಕ್ತಿ ಬೇಕು. ಕೆಲವು ಗಾಡಿಗಳ ಬಾಗಿಲು ಹೊರಗೆ ತೆರೆಯುವುದು, ನೋಡಿರುವಿರಾ? ಅಂಥಹ ಗಾಡಿಯನ್ನು ಹುಡುಕಬೇಕು. ನನಗೆ ಒಮ್ಮೆ ಆ ಯುಕ್ತಿ ಸಾಧಿಸಿದೆ, ಯಾವಾಗಲೂ ಅದನ್ನೆ ನಡೆಸುವೆ. ಒಳಗಿನಿಂದ ಜನರು 'ಇಲ್ಲ, ಇಲ್ಲ' ಎಂದು ಕೂಗುವಾಗಲೆ ನಾನು ಹೊರಗೆ ತೆರೆಯುವ ಬಾಗಿಲನ್ನು ಎಳೆದೆ. ತಟ್ಟನೆ ಒಳಗಿನಿಂದೊಂದು ವ್ಯಕ್ತಿ ಉರುಳಿಬಿದ್ದಿತು.... ಬಾಗಿಲಿಗೆ ಆತುಕೊಂಡು ಕುಳಿತ ವ್ಯಕ್ತಿ! ಸುತ್ತಲೆಲ್ಲ ಹಾಹಾಕಾರವೆದ್ದಿತು. ಸ್ಟೇಶನ ಮಾಸ್ಟರರು ಬಂದರು. 'ಏನು, ಯಾರದು ಬಿದ್ದವರು?' ಎಂದು ಗದ್ದರಿಸಿದರು. 'ನಾನು' ಎನ್ನುತ್ತ ನಾನೇ ಮುಂದೆ ಬಂದೆ. ಘಾಂಘೀಂ ಅಂತ ಸಂಧ್ಯಾವಂದನೆಯ ಮಂತ್ರದ ಹಾಗೆ ಏನೋ ಇಂಗ್ಲಿಶದಲ್ಲಿ ಬೈದರು. 'ನಡೆ, ನಿನ್ನ ಸಲುವಾಗಿ ಟ್ರೇನು ಲೇಟ ಆದೀತು' ಎಂದು ಅಧಿಕಾರದರ್ಪದಿಂದ ನನ್ನನ್ನು ಒಳಗೆ ತಳ್ಳಿ ಬಾಗಿಲನ್ನು ಭದ್ರವಾಗಿ ಮುಚ್ಚಿಬಿಟ್ಟರು! ಅಂದಿನಿಂದ ನನಗೆ ಸ್ಥಳ ದೊರೆಯುತ್ತಿದೆ. ಆದರೆ ಎಲ್ಲರಿಗೂ ಆ ಕಲೆ ಸಾಧಿಸಬೇಕಲ್ಲ? ಇದಲ್ಲದೆ ಇನ್ನೂ ಒಂದು ಲಕ್ಷ್ಯದಲ್ಲಿಡತಕ್ಕ ಮಾತಿದೆ. ನಿಮ್ಮ ಸ್ಟೇಶನು ಬಂದಾಗ ಇಳಿಯುವುದೂ ಬಲು ಕಷ್ಟ. ಅದಕಾಗಿಯೂ ಹೊರಗೆ ತೆರೆಯುವ ಬಾಗಿಲದ ಗಾಡಿಯನ್ನೆ ಹುಡುಕಬೇಕಾಗುವದು. ಇರಲಿ,

ಇಷ್ಟೆಲ್ಲ ಸಾಮಾನ್ಯ ಮನುಷ್ಯನಿಗೆ ತಿಳಿಯುವುದು ಹೇಗೆ? ಅದಕ್ಕಾಗಿ ಸರಕಾರದವರಾಗಲಿ, ಸಾಮಾಜಿಕ ಸಂಘದವರಾಗಲಿ ಪ್ರದರ್ಶನಗಳನ್ನೇರ್ಪ-ಡಿಸಬೇಕು; ಅಲ್ಲಿ ಸಾಕ್ಷಾತ್ ಪ್ರಯೋಗ (experiment) ವನ್ನು ಮಾಡಿ ಥ. ಕ್ಲಾ. ಸಂಚಾರದ ಕಲೆಯನ್ನೂ ಪಾಠವನ್ನೂ ಕಲಿಸಬೇಕು, ತೋರಿಸಬೇಕು.

ಒಂದು ಉದಾಹರಣೆಯನ್ನೇ ತೆಗೆದುಕೊಳ್ಳೋಣ; ಇಂತಹ ಪ್ರದರ್ಶ-ನಕ್ಕೆ ವೆಚ್ಚ ಕೂಡ ಬಹಳ ಬೇಕಾಗುವುದಿಲ್ಲ ಎಂಬುದು ಆ ಮೇಲೆ ನಿಮಗೆ ಕಂಡುಬರುವುದು. ಹಳೆಯ ರಾಕ್ ಆಯಿಲ್ ಟಿನ್ (ಚಿಮಣಿ ಎಣ್ಣೆಯ ಡಬ್ಬಿ) ಒಂದನ್ನು ಒಂದು ಕಡೆ ಇಟ್ಟುಬಿಡಬೇಕು; ಆ ಡಬ್ಬಿಯು ಮಾತ್ರ ಚಿಮಣಿ ಎಣ್ಣೆಯದೆ ಇರಬೇಕಾಗುವುದು, ಇಲ್ಲವಾದರೆ ಥ. ಕ್ಲಾ. ಗಾಡಿಯ ಗುರುತು ಹಿಡಿಯುವ ಕಲೆಯನ್ನು ಕಲಿಸಲು ಸಾಧ್ಯವಿಲ್ಲ. ಪ್ರದರ್ಶನದ ಸ್ವಯಂಸೇವಕನೊಬ್ಬನು ಅತ್ತಿತ್ತ ನಾಯಿ ಬೆನ್ನು ಹತ್ತಿದವನಂತೆ ಓಡಿ ಬರಬೇಕು: ಇವನು ಥ. ಕ್ಲಾ. ಪ್ರವಾಸಿಗ ಡಬ್ಬಿಯ ಹತ್ತಿರ ಬಂದ ಕೂಡಲೆ ಅವನ ಮೂಗು ಅರಳುವುದು– ಚಿಮಣಿಯ ಎಣ್ಣೆಯ ವಾಸನೆ ಯಿಂದ; ಥ. ಕ್ಲಾ. ಗಾಡಿಗಾದರೂ ಇಂತಹದೆ ವಾಸನೆ ಇರುವುದು. ಆ-ಮೇಲೆ ಸಂತೋಷದಿಂದ ಡಬ್ಬಿಯ ಮುಚ್ಚಳದಲ್ಲಿದ್ದ ಸಣ್ಣ ತೂತಿನಲ್ಲಿ ಹಣಿಕಿಕ್ಕಿ ನೋಡುವನು; ಈ ಸಣ್ಣ ತೂತು ಥ. ಕ್ಲಾ. ಗಾಡಿಯ ಬಾಗಿಲು ಎಂದು ತಿಳಿಯಬೇಕು. ಆ ಮೇಲೆ ಆ ತೂತಿನೊಳಗಿಂದ ತನ್ನ ಇಡಿಯ ದೇಹವನ್ನೆಲ್ಲ ಸ್ವಯಂಸೇವಕನು ಡಬ್ಬಿಯೊಳಗೆ ಸೇರಿಸಬೇಕು; ಅವನು ಯಾವ ರೀತಿಯಿಂದ ಅದನ್ನು ಸಾಧಿಸುವನೊ ಆ ರೀತಿಯಿಂದ ಥ. ಕ್ಲಾ. ಗಾಡಿಯಲ್ಲಿ ಹೋಗತಕ್ಕುದು ಎಂದು ಪ್ರೇಕ್ಷಕರಿಗೆ ತಿಳಿದುಬರುವುದು. ಇದು ಪ್ರದರ್ಶನದ ಒಂದು ಸ್ಟಾಲ್ (stall), ಮುಂದಿನ ಸ್ಟಾಲಿನಲ್ಲಿ ಒಂದು ಜೇನು ಹುಟ್ಟನ್ನು ತಂದಿಟ್ಟಿರಬೇಕು; ಪ್ರೇಕ್ಷಕರು ಬಂದು ನೋಡುವಾಗ ಒಂದೊಂದು ಜೇನನ್ನು ತಂದು ಬಿಡಬೇಕು; ಹುಟ್ಟಿನಲ್ಲಿ ಈಗಾಗಲೆ ಸಾವಿರ ಜೇನುಗಳಿದ್ದರೂ ಸಾವಿರದೊಂದನೆಯ ಜೇನು ಪ್ರಶಸ್ತವಾಗಿ ಅಲ್ಲಿ ಹೋಗಿ ಕುಳಿತುಕೊಳ್ಳು-ವುದು. ನೋಡಿದಿರಿಲ್ಲೊ? ನಡೆಯಿರಿನ್ನು ಮುಂದಿನ ಸ್ಟಾಲಿಗೆ. ಥ. ಕ್ಲಾ. ಕಂಪಾರ್ಟಮೆಂಟಿನ ಒಳಗಿನ ದೃಶ್ಯವನ್ನೂ ಅಲ್ಲಿ ಹೋದ ಮೇಲೆ ಕುಳಿತು ಕೊಳ್ಳುವುದು ಹೇಗೆ ಎಂಬುದನ್ನೂ ಈ ಜೇನು ಹುಟ್ಟಿನ ಪ್ರದರ್ಶನದಿಂದ

ನಿಮಗೆ ತೋರಿಸಿದಂತಾಯಿತು. ಇನ್ನೂ ಉಳಿಯಿತೇನು ? ಹುಂ. . . ಕುಳಿತ ಗಾಡಿಯಿಂದ ಇಳಿಯುವುದು ಹೇಗೆ? ಸರಿ. ಸ್ಟಾಲು ಬಿಟ್ಟು ಹೋಗುವಾಗ




“. ಆ ಮೇಲೆ ಆ ತೂತಿನೊಳಗಿಂದ ತನ್ನ ಇಡಿಯ ದೇಹವನ್ನೆಲ್ಲ ಸ್ವಯಂಸೇವಕನು ಡಬ್ಬಿಯೊಳಗೆ ಸೇರಿಸಬೇಕು...”

ಜೇನುಹುಟ್ಟಿಗೆ ಕಲ್ಲನ್ನೊಂದು ಎಸೆಯಿರಿ. ಜೇನ್ನೊಣಗಳು ಹೇಗೆ ಕೆಳಗಿಳಿ-ಯುವುವೊ ಹಾಗೆಯೆ ನೀವೂ ಕೆಳಗಿಳಿಯತಕ್ಕದ್ದು.

ಪ್ರವಾಸದಷ್ಟೆ ಜೀವನಕ್ಕೆ ಅವಶ್ಯವೆನಿಸುವ ಇನ್ನೂ ಕೆಲವು ಸಂಗತಿಗಳಿವೆ. ನಾನು ಹೇಳುವುದಿಷ್ಟೆ, ನನ್ನ ಜೀವನಕ್ಕೆ ಉಪಯುಕ್ತ ಎನಿಸುವ ಸಂಗತಿಗಳು ನನಗೆ ಪ್ರದರ್ಶನಗಳಲ್ಲಿ ಬೇಕು. ನಾನು ತಕ್ಕಮಟ್ಟಿಗೆ ಸುಶಿಕ್ಷಿತನಿದ್ದೇನೆ, ಇಷ್ಟೆ ಅಲ್ಲ ಸುಶಿಕ್ಷಿತರ ವತಿಯಿಂದ, ಸುಶಿಕ್ಷಿತರ ಹಿತಕ್ಕಾಗಿ ನಾನು ಇದನ್ನು ಬರೆಯುತ್ತ ಶಾಲೆ-ಕಾಲೇಜುಗಳಲ್ಲಿ ಕಲಿಯುವುದು ಪರೀಕ್ಷೆಗಾಗಿ, ಪ್ರದರ್ಶನಗಳಲ್ಲಿ ಕಲಿಯುವುದು ವ್ಯವಹಾರಕ್ಕಾಗಿ– ಎಂದು ನನ್ನದೊಂದು ಸೂತ್ರ; ಅಥವಾ ಬಾದರಾಯಣ ಕಾಲದಿಂದ ಇದೇ ಪರಿಸ್ಥಿತಿ ನಡೆದು ಬಂದುದರಿಂದ ಇದು 'ಬಾದರ್ಆಯಣಸೂತ್ರ'ವೆಂದೇ ಹೇಳೋಣ. ಇರಲಿ; ಇಹಲೋಕದ ಪ್ರವಾಸದ ಆವಶ್ಯಕತೆಯನ್ನೂ ಉದಾಹರಣೆಯನ್ನೂ ಮೇಲೆ ತೋರಿಸಿದ್ದೇನೆ. ಅದರಂತೆಯೆ ಪರಲೋಕ ಪ್ರವಾಸದ ಜ್ಞಾನವನ್ನೂ ಪ್ರದರ್ಶನದಲ್ಲಿ ಮಾಡಿಕೊಡಬೇಕೆಂದು ನನ್ನ ಅಭಿಪ್ರಾಯ. ಉಚ್ಚಜಾತಿಗಳಲ್ಲಿ ಅರ್ಥಾತ್ ಭೂಸುರರಾದ ಬ್ರಾಹ್ಮಣ ಜಾತಿಯಲ್ಲಿ ಪರಲೋಕ ಪ್ರವಾಸವನ್ನು ಮಾಡುವುದು ಸುಲಭವಾದ ಮಾತಲ್ಲ. ಬ್ರಾಹ್ಮಣನಾದುದರಿಂದ ನಾನು ಮೋಕ್ಷಕ್ಕೇನೋ ಮುಟ್ಟಬಹುದು; ಆದರೆ ಮೊದಲು ಹೊರಡಬೇಕಲ್ಲ? ಫೋರ್ಡ್ ಮಾದರಿಯ ಮೋಟಾರುಗಳ ವಿಷಯವಾಗಿ ಒಂದು ವಿನೋದವಿದೆ, It can do anything except start (ಹೊರಡುವುದೊಂದನ್ನು ಬಿಟ್ಟು ಈ ಗಾಡಿ ಬೇಕಾದ್ದನ್ನು ಮಾಡಬಲ್ಲದು) ಅಂತೆ. ಬ್ರಾಹ್ಮಣನ ಪರಲೋಕ ಪ್ರವಾಸವೂ ಹಾಗೆಯೆ, ಬೇನೆ ಬರುವುದು, ಎಲ್ಲ ಆಪ್ತೇಷ್ಟರು ಬರುವರು, ಡಾಕ್ಟರನು ಬರುವನು, ಕೊನೆಗೆ ಮರಣ ಬರುವುದು; ಇಷ್ಟಾಗುವುದೊಂದೇ ತಡ ಜಗತ್ತೇ ಬಯಲಾಗುವುದು. ಶವಬಿದ್ದ ಕೂಡಲೆ ಪಕ್ಕದ ಮನೆಯವನಿಗೆ ಮೈಯಲ್ಲಿ ಜಾಡ್ಯವಾಗಿ ಅವನು ಮನೆಯಿಂದ ಕದಲಲಾರನು, ಪಾಪ! ಇನ್ನೊಬ್ಬ ಬ್ರಾಹ್ಮಣನ ಹೆಂಡತಿ ಗರ್ಭಿಣಿ, ಮೂರನೆಯವನಿಗೆ ತಂದೆ–ತಾಯ್ಗಳು ಜೀವದಿಂದಿರುವರಂತೆ, ನಾಲ್ಕನೆಯವನು ಬರಲು ಉತ್ಸುಕನಾದರೂ ಬಹಿಷ್ಕೃತನಿದ್ದುದರಿಂದ ಅವನು ಬಂದರೆ ಆ ಹೆಣಕ್ಕೆ ಮೋಕ್ಷವಿಲ್ಲ! ಹೀಗಾಗಿ ಈ ಧಾರ್ಮಿಕ– ಸಾಮಾಜಿಕ– ಆರೋಗ್ಯ ತೊಡಕುಗಳು ಬಿಡುವವರೆಗೆ, ಪಾಪ, ಸತ್ತವನ ದೇಹವು ಸತ್ತಲ್ಲಿಯೆ ಕೊಳೆಯ ಬೇಕಾಗುವುದು. ನಿಜವಾಗಿ ನೋಡಿದರೆ ಈ ತಪ್ಪು ಯಮ-

ದೇವನದು. ತಾನು ಜೀವವನ್ನು ಒಯ್ಯುವಾಗ ತನ್ನ ಜೊತೆಗೆ ನಾಲ್ಕು ಯಮದೂತರನ್ನು ತಂದು, ಅವರ ಹೆಗಲಮೇಲೆ ಹೆಣವನ್ನು ಸಾಗಿಸಿದರೆ ಆಗದೆ? ಬೇಕಾದರೆ extra luggage ( ಹೆಚ್ಚಿನ ಸಾಮಾನು ) ಎಂದು ಚಾರ್ಜ್ ಮಾಡಲಿ, ಇಲ್ಲವೆ ಮ್ಯುನಿಸಿಪಾಲಿಟಿ ಗಾಡಿಯಂತೂ ಇದ್ದೇ ಇದೆ, ಅದನ್ನು ಎಳೆಯಲು ತನ್ನ ಕೋಣವನ್ನು ಬಿಟ್ಟಿಯಾಗಿ ಕೊಡಬೇಕು; ಇಲ್ಲವೆ ನೆವ ಹೇಳಿ ಮನೆಯೊಳಗೆ ಕುಳಿತ ಮಿಕ್ಕ ಬ್ರಾಹ್ಮಣರನ್ನು ತನ್ನ ನಾಯಿಗಳನ್ನು 'ಛೂ' ಬಿಟ್ಟು ಎಬ್ಬಿಸಲಿ. ಆದರೆ ಆ ಧರ್ಮರಾಯನು ಇಂತಹದೊಂದನ್ನೂ ಮಾಡುವುದಿಲ್ಲ. ಡಾಕ್ಟರರ ಬಿಲ್ಲ (bill) ನ್ನು ವಸೂಲು ಮಾಡಲು ಬಂದವನಂತೆ ಜೀವವೊಂದನ್ನು ಒಯ್ದನೆಂದರೆ ಮುಗಿಯಿತು ಅವನ ಕೆಲಸ. ಇನ್ನು ಮಾಡಬೇಕೇನು? ಸರಕಾರದವರು ಒಂದು ಕಾಯಿದೆ ಪಾಸು ಮಾಡಬೇಕೆ, ಸಾಯುವವರೆಲ್ಲರೂ ಮೊದಲು ಸ್ಮಶಾನದಲ್ಲಿ ಎಲ್ಲ ವ್ಯವಸ್ಥೆ ಆಗಿದೆಯೆ ಇಲ್ಲವೆ ನೋಡಿಕೊಂಡು ಆ ಮೇಲೆ ಅಲ್ಲಿಯೆ ಹೋಗಿ ವ್ಯವಸ್ಥೆಯ ಮಗ್ಗುಲಲ್ಲಿಯೆ ಸಾಯಬೇಕೆಂದು? ಯಾವನು ಈ ಕಾಯಿದೆ-ಯನ್ನು ಮುರಿಯುವನೊ ಅವನಿಗೆ ದೇಹಾಂತ ಶಿಕ್ಷೆ ಎಂದರೆ ಮಾತ್ರ ತೊಡಕೇ ಬಗೆಹರಿದಂತಾಯಿತು. ಆದರೇನು? ಸದ್ಯಕ್ಕೆ ಯಮರಾಯನಾಗಲಿ ಸರಕಾರ-ವಾಗಲಿ ನಮ್ಮ ಕೈಯಲ್ಲಿಲ್ಲ; ಆದುದರಿಂದ ಈ ತೊಡಕನ್ನು ನಾವಾಗಿಯೆ ಬಿಡಿಸಿಕೊಳ್ಳಬೇಕು. ಅದಕಾಗಿ ಪ್ರದರ್ಶನವನ್ನೇರ್ಪಡಿಸಬೇಕು. ಅಲ್ಲಿ ಇದರ ವ್ಯವಸ್ಥೆಯನ್ನು ಮಾಡಬೇಕು. Town Planing- ನಗರ-ಯೋಜನೆ— ಅನ್ನುವರಲ್ಲಾ ಅಂತಹದೊಂದು ಮಾದರಿಯ ನಕಾಶೆಯನ್ನು ತೋರಿಸಬೇಕು. ಮನೆಗಳನ್ನು ಹೇಗೆ ಕಟ್ಟಿಸಬೇಕು– ಎಂಬುದರ ಜ್ಞಾನವು ಈ ನಕಾಶೆಯನ್ನು ನೋಡಿ ನಮಗಾಗಬೇಕು- ನೆರೆಮನೆಯವರಿಗೆ ನೆಗಡಿ–ಕೆಮ್ಮುಗಳಿರಬಾರದು, ತಂದೆ-ತಾಯ್ಗಳಿರಬಾರದು, ಬಹಿಷ್ಕಾರವಿರಬಾರದು, ಗರ್ಭವತಿ ಹೆಂಡತಿ ಇರಬಾರದು- ಇಂತಹರ ಮನೆಗಳ ನಡುವೆ ನಮ್ಮ ಮನೆ ಇರಬೇಕು. ಇದು ಒಂದು ಯೋಜನೆ. ಇಲ್ಲವೆ ನಮ್ಮ ಮನೆಯಲ್ಲಿಯೆ ರೋಗಿಯ ಕೋಣೆಯೂ ಉರುವಲ ಕಟ್ಟಿಗೆಯನ್ನಿಡುವ ಕೋಣೆಯೂ ಒಂದೇ ಆಗುವಂತಿರಬೇಕು. ಇಲ್ಲವೆ– ಸಾಯುವಾಗ ಜೀವದ ಕೂಡ ದೇಹವೂ ಹಾರಿಹೋಗುವಂತಹ ಯೋಗಸಾಧನೆ ಇರಬೇಕು. ನಾನೇನು ಕಿಡಿಗೇಡಿತನ

ದಿಂದಾಗಲಿ ಹೇಸಿತನದಿಂದಾಗಲಿ ಇದನ್ನು ಬರೆಯುವೆನೆಂದು ಭಾವಿಸ ಬಾರದು. ರಣಾಂಗಣದಲ್ಲಿ ಗತಿ ಇಲ್ಲದೆ ಬಿದ್ದಂತೆ ಮನೆಯಲ್ಲಿ ಬಿದ್ದುಕೊಳ್ಳುವ ಉಚ್ಚಜಾತಿಯ ಶವಗಳನ್ನು ನೋಡಿದವರಿಗೆ ನನ್ನ ಮಾತಿನ ಆವಶ್ಯಕತೆ ಕಂಡುಬರುವುದು.*

ಹೋಗಲಿ, ನಾನು ಬರೆಯುವುದು ಪ್ರದರ್ಶನದ ತತ್ತ್ವವನ್ನು ವಿವರಿಸುವುದಕ್ಕಾಗಿ, ಪ್ರೇತ ಸಂಸ್ಕಾರದ ನಿಯಮಗಳನ್ನು ಹೇಳುವುದಕ್ಕಾಗಿ ಅಲ್ಲ. ಇದಲ್ಲದೆ ಇದೇ ವಿಷಯವನ್ನು ವಿಸ್ತಾರಗೊಳಿಸತೊಡಗಿದೆನೆಂದರೆ ಕೆಲವು ಕುಚೇಷ್ಟೆಯ ವಿದ್ಯಾರ್ಥಿಗಳು ಸಾಹಿತ್ಯಕ್ಕೂ **ಗತಜೀವನಕ್ಕೂ** ಸಂಬಂಧವಿದೆ ಎಂಬ ತಲೆತಿರುಕತನದ ತತ್ತ್ವವನ್ನು ನಾನು ಹೇಳುತ್ತಿರುವೆ.... ಎಂದು ಪ್ರಚಾರಗೊಳಿಸಬಹುದು. ವಿದ್ಯಾರ್ಥಿಗಳೆಂದ ಮಾತ್ರಕ್ಕೆ ಸ್ಮರಣೆಗೆ ಬಂದಿತು. ವಿದ್ಯಾರ್ಥಿಗಳು ಅರ್ಥಾತ್ ತರುಣರು ಭಾರತದ ಭಾವೀ ಭಾಗ್ಯೋದಯದ ಆಧಾರಸ್ತಂಭರೆಂದು ಮಹಾನ್‌ಮಹಾನ್ ಮುಂದಾಳು-ಗಳೆಲ್ಲ ಹೇಳುತ್ತಿದ್ದಾರೆ. ನಮ್ಮ ದೇಶಕ್ಕೆ, ಸಮಾಜಕ್ಕೆ ಸ್ತಂಭಗಳು ಅವಶ್ಯ ಎಂಬುದು ನಿರ್ವಿವಾದ ವಿಷಯವಾಗಿದೆ. ಇಷ್ಟು ದಿವಸಗಳವರೆಗೆ ಕೂರ್ಮಾ-ವತಾರದ ಬೆನ್ನಿನ ಮೇಲೆ ನಿಂತಿತ್ತು ನಮ್ಮ ದೇಶ- ಆದಕಾಗಿ ಕೂರ್ಮ ನಡೆದಲ್ಲಿ ನಮ್ಮ ದೇಶ ನಡೆಯುತ್ತಿತ್ತು. ಈ ಕೂರ್ಮ (=ಆವೆ) ಗತಿಯಿಂದ ದಾರಿ ಒತ್ತರವಾಗಿ ಸಾಗುವುದಿಲ್ಲ ಎಂಬುದು ಅನುಭವಸಿದ್ಧವಾದ ಮಾತು. ಈ ಕೂರ್ಮಗತಿಯಿಂದ ನಾವು ಮಿಕ್ಕ ದೇಶಗಳಿಗಿಂತ ಹಿಂದುಳಿದಿದ್ದರೆ ಅದು

---

* ಮೇಲಿನ ಮಾತುಗಳಿಂದ ನಾನೇನೊ ಜಾತಿಯ ದುರಭಿಮಾನಿ ಎಂದು ಮಿಕ್ಕ ಜಾತಿಯವರ ಕಲ್ಪನೆಯಾಗಬಹುದು. ಆದರೆ ಕೇವಲ ನನ್ನ ಜಾತಿಯದೆ ಹಿತವನ್ನು ಮಾಡಬೇಕೆಂದು ನಾನು ಬರೆದಿಲ್ಲ, ಉದಾಹರಣೆ ಎಂದು ತೋರಿಸಿದ್ದೇನೆ ಇಷ್ಟೆ. ಹಾಗೆ ನೋಡಿದರೆ ಎಲ್ಲ ಜಾತಿಯವರಿಗೂ ಅಂತಹ ವ್ಯವಸ್ಥೆಯಾಗಬೇಕೆಂದು ನನ್ನ ನಿಷ್ಪಕ್ಷಪಾತದ ಅಭಿಪ್ರಾಯ. ಇದಲ್ಲದೆ ಹಿಂದುಳಿದ ಜಾತಿಯವರಿಗಾಗಿ ಸ್ಪೆಶಲ್ ವ್ಯವಸ್ಥೆ ಮಾಡಿದರೂ ನನ್ನ ಅಡ್ಡಿ ಇಲ್ಲ ಅಥವಾ ಬ್ರಾಹ್ಮಣನ ಒಂದು ದೇಹದ ವ್ಯವಸ್ಥೆಯಾದರೆ ಮಿಕ್ಕ ಜಾತಿಯವರ ಮೂರು ದೇಹಗಳನ್ನೊಯ್ಯಬೇಕು— ಎಂದು ಪ್ರಮಾಣವನ್ನು ಗೊತ್ತು ಮಾಡಿದರೂ ಅಡ್ಡಿ ಇಲ್ಲ. ಇಲ್ಲವೆ ದಿವಂಗತ ರ್‍ಯಾಮ್‌ಸೇ ಮ್ಯಾಕ್‌ಡೊನಾಲ್ಡರು ಪ್ರೇತನಿರ್ಣಯವನ್ನು (Funeral Award) ಕೊಟ್ಟರೂ ನಡೆಯುವುದು.

ನಮ್ಮ ದೋಷ, ಕೂರ್ಮದ ದೋಷವಲ್ಲ. ಇದನ್ನರಿತೇ ಮುಂದಾಳುಗಳು ಇಂದು ನಮ್ಮ ದೇಶವನ್ನು ವಿದ್ಯಾರ್ಥಿಗಳ ಅರ್ಥಾತ್ ತರುಣರ ಬೆನ್ನ ಮೇಲಿಟ್ಟಿದ್ದಾರೆ. ಆದರೆ ತರುಣರಿಗೆ ಈ ಸ್ತಂಭ-ತತ್ತ್ವದ ಅರ್ಥವಾದಂತಿಲ್ಲ. ಅವರಿಗೆ ಅರ್ಥವಾಗದಿದ್ದರೆ ನಮ್ಮ ದೇಶ ಮುಂದೆ ಸಾಗುವಂತಿಲ್ಲ. ದೇಶವು ತಮ್ಮ ಬೆನ್ನು ಕಟ್ಟಿಕೊಂಡದ್ದರಿಂದ ತಾವು ಹೋದಲ್ಲಿ ಅದೂ ಹೋಗಲೇ ಬೇಕಾಗುವುದು ಎಂಬುದನ್ನು ಅವರು ಮರೆತಂತೆ ಕಾಣುವುದು. ತರುಣರು ಹೋಗುವುದೆಂದರೆ ಪರೀಕ್ಷೆಯ ಪೆಂಡಾಲು (pendal) ಗಳಿಗೆ, ಅರ್ಥಾತ್ ನಮ್ಮ ದೇಶವೂ ಅದಕ್ಕಿಂತ ಮುಂದೆ ಹೋಗಲು ಸಾಧ್ಯವಾಗಿಲ್ಲ. ಇದಲ್ಲದೆ ತರುಣರಿಗೆ ಮಾತು ಮಾತಿಗೆ ಸೆಟೆದು ನಿಂತು ಚಪ್ಪಾಳೆ ಬಾರಿಸುವ ಹುರುಪು ಹೆಚ್ಚು. ಹೀಗೆ ಕೈಬಿಟ್ಟು ಎದ್ದು ನಿಂತರೆ ಬೆನ್ನ ಮೇಲಿದ್ದ ದೇಶವು ಜಾರಿ ನೆಲಕ್ಕೆ ಕುಪ್ಪಳಿಸುವ ಹೆದರಿಕೆ ಹೆಚ್ಚು. ಇದನ್ನೆಲ್ಲ ತಿಳುಹಿಸಿ ಕೊಡಲು ಒಂದು ಪ್ರದರ್ಶನವನ್ನೇರ್ಪಡಿಸಿದರೆ ಒಳಿತಾಗಲಿಕ್ಕಿಲ್ಲವೆ? ಉದಾಹರಣೆಗಾಗಿ, ಒಂದು ಕಲ್ಲಿನ ಕಂಬ, ಒಂದು ಕಟ್ಟಿಗೆಯ ಕಂಬ, ಎರಡನ್ನೂ ಒಂದರ ಬದಿಗೊಂದು ನಿಲ್ಲಿಸಬೇಕು. ಎರಡೂ ಕಂಬಗಳ ಸುತ್ತು ಅನೇಕತರದ ಕ್ರಿಮಿ ಕೀಟಕಗಳನ್ನೂ ತಗಣಿ-ತಂಡಗಳನ್ನೂ ಹರಿಬಿಡಬೇಕು. ಸ್ವಲ್ಪಾವಧಿಯಲ್ಲಿಯೆ ಕಟ್ಟಿಗೆಯ ಕಂಬ ಸಡಿಲಾಗುವುದು, ಪೊಳ್ಳಾಗುವುದು, ಸಮೀಪಕ್ಕೆ ಯಾರನ್ನೂ ಬರಗೊಡದಂತಹದಾಗುವುದು. ಅರ್ಥವೇನು? 'ತರುಣರೆ, ನೀವು ಕಂಬಗಳೇನೊ ನಿಜ, ಆದರೆ ಕಂಬಗಳಾಗಿಯೆ ಉಳಿಯಬೇಕಾದರೆ ಕಟ್ಟಿಗೆಯ ಕಂಬವಾಗಬೇಡಿರಿ, ಕಲ್ಲಿನ ಕಂಬವಾಗಿರಿ' ಎಂಬ ಸತ್ಯವು ಕಣ್ಣು ಕಟ್ಟಿ ನಿಲ್ಲುವುದು.

ಕ್ಷಮೆ ಇರಲಿ. ನಾನು ಕತೆ ಹೇಳುತ್ತಿರುವುದಿಲ್ಲ ಹೀಗೆಯೆ ದೃಷ್ಟಾಂತಗಳನ್ನು ಬೆಳೆಸಲಿಕ್ಕೆ. 'ಈಗ ನೋಡಿದಲ್ಲೆಲ್ಲ ಪ್ರದರ್ಶನಗಳ ಹುಚ್ಚು' ಎಂದು ಮೊದಲೇ ಹೇಳಿದ್ದೇನ. ನಾನು ಬರೆಯುವದನ್ನು ಓದಿದ ಮೇಲೆ ನೋಡಿದಲ್ಲೆಲ್ಲ ಪ್ರದರ್ಶನಗಳ ಜಾಣತನ' ಕಂಡುಬಂದರೆ ನಾನು ಕೃತಾರ್ಥನಾಗುವೆ, ಎಂದರೆ ಇನ್ನು ಮುಂದೆ ಹೀಗೆ ಬರೆಯುವುದನ್ನೆ ಬಿಟ್ಟುಕೊಡುವೆ. ಇದನ್ನೋದಿದವರೂ ಇದನ್ನು ಮರೆತುಬಿಡಬಹುದು.

ಜುಲೈ '೩೮

# ಗಂಡನ ಗಂಡಾಂತರ

ಗಂಡನೆಂದರೇನು ? ಗಂಡಾಂತರವೆಂದರೇನು ?— ಈ ಪ್ರಶ್ನೆಗಳಿಗೆ ಉತ್ತರರೂಪವಾದ ವ್ಯಾಖ್ಯೆಯನ್ನು ಕೊಟ್ಟೇ ಈ ಲೇಖವನ್ನು ಪ್ರಾರಂಭಿಸುವೆ; ಯಾಕೆಂದರೆ, ಈ ಲೇಖವು ಸಶಾಸ್ತ್ರೀಯ–ಎಂದರೆ ಶಾಸ್ತ್ರಾಭ್ಯಾಸದ-ಪದ್ಧತಿಯಲ್ಲಿ ಬರೆಯಲ್ಪಡಬಹುದಾಗಿದೆ 'ಗಂಡಾಂತರ' ಎಂಬ ಶಬ್ದಕ್ಕೆ ಎರಡು ಅರ್ಥಗಳಿವೆ– ಈ ಲೇಖದಲ್ಲಿ; ಒಂದು, ಸಂಸ್ಕೃತಭಾಷೆಯಲ್ಲಿ; ಇನ್ನೊಂದು, ಕನ್ನಡ ಭಾಷೆಯಲ್ಲಿ. ಅನ್ಯೋ ಗಂಡಃ (ಇನ್ನೊಬ್ಬ ಗಂಡ) ಗಂಡಾಂತರಂ, ಎಂದು ಸಂಸ್ಕೃತದ ಅರ್ಥ; ಗಂಡನಿಂದ ಅಂತರ (ದೂರ)= ಗಂಡಾಂತರ, ಎಂಬುದು ಕನ್ನಡ ಅರ್ಥ.

ಈ ಎರಡೂ ಅರ್ಥಗಳಲ್ಲಿ ಇಂದು ಗಂಡಂದಿರ ಮೇಲೆ ಗಂಡಾಂತರ ಬರುವುದಿದೆ ಎಂದು ವೃತ್ತಪತ್ರಗಳನ್ನೋದುವ ವಾಚಕರಿಗೆ ಬೇರೆ ಹೇಳಬೇಕಾ-ಗಿಲ್ಲ. ಕೇಂದ್ರಶಾಸನಸಭೆಯಲ್ಲೂ ಈ ವಿಷಯಕ್ಕೆ ಸಂಬಂಧಿಸಿದ ಕಾನೂನುಗಳು ಮಂಡಿಸಲ್ಪಡಲಿವೆ ಎಂದು ಓದಿ ಯಾವ ಗಂಡೆದೆಯು ತಲ್ಲಣಿಸಿರಲಿ-ಕ್ಕಿಲ್ಲ? ಇಂದಿನದು ಸ್ವಾತಂತ್ರ್ಯಯುಗ; ಸ್ವಾತಂತ್ರ್ಯ ಸಂಪಾದನೆಗಾಗಿ ಸೆರೆ-ಮನೆಯ ಕಷ್ಟಗಳನ್ನನುಭವಿಸಿದ ಕಾಂಗ್ರೆಸ್ ವೀರರ ಆಡಳಿತದ ಯುಗ. ಈ ಯುಗದಲ್ಲಿ ಹಿಂದುಸ್ಥಾನದಲ್ಲಿಯ ಗಂಡಂದಿರ ಸ್ವಾತಂತ್ರ್ಯಕ್ಕೆ ಧಕ್ಕೆ ತಗಲುವ ಪ್ರಸಂಗವೆ! ಹಾಯ್, ಹಾಯ್, ಕಲಿಕಾಲವೆ!

ಅನಾದಿಕಾಲದಿಂದಲೂ ಸಂಸಾರದಲ್ಲಿ ಗಂಡನು ಸರ್ವತಂತ್ರ ಸ್ವತಂತ್ರನಾಗಿದ್ದಾನೆ. ಬೇಕಾದಾಗ ಬೇಕಾದಷ್ಟು ಹೆಂಡಂದಿರನ್ನು ಮದಿವೆಯಾಗುವ ಸ್ವಾತಂತ್ರ್ಯ ಅವನದು; ಬೇಕಾದಾಗ ಬೇಕಾದವಳನ್ನು (ಇಲ್ಲವೆ–ದವರನ್ನು) ಬಿಟ್ಟುಕೊಡುವ ಸ್ವಾತಂತ್ರ್ಯ ಅವನದು; ಬೇಕಾದಷ್ಟು ಮಕ್ಕಳ ತಂದೆಯಾಗುವ ಸ್ವಾತಂತ್ರ್ಯ ಅವನದು; ಮಕ್ಕಳು ಅಳುವಾಗ ಮನೆಯಿಂದ ಹೊರಬಿದ್ದು ಮಕ್ಕಳು ಮಲಗಿದ ಮೇಲೆ ಮರಳಿಬರುವ ಸ್ವಾತಂತ್ರ್ಯ ಅವನದು; ಇಂತಹ ಅನೇಕಮುಖ ಸ್ವಾತಂತ್ರ್ಯದ ಮೇಲೆ ಇಂದು ಗದೆ ಬೀಳುವುದಿದೆ!

ಹೊಸತಾಗಿ ಮಂಡಿಸಲಿರುವ ಕಾನೂನುಗಳು ಗದೆಯಲ್ಲದೆ ಮತ್ತೇನು?



ಹೆಂಡತಿಗೆ ಮಕ್ಕಳಿಲ್ಲ; ಗಂಡುಮಗನಿಗಾಗಿ- ಇನ್ನೊಂದು ಮಾಡಿಕೊಳ್ಳಬೇಕೆಂದರೆ ಕಾಯಿದೆ! (ಪುಟ ೩೭)

ಒಬ್ಬ ಹೆಂಡತಿ ಜೀವದಿಂದಿರುವಾಗ ಇನ್ನೊಬ್ಬಳನ್ನು ಮದುವೆಯಾಗಬಾರದೆಂದು ಕಾಯಿದೆ ಮಾಡುವರಂತೆ! ಅದೇಕೊ! ಆ ಹೆಂಡತಿ ಜೀವದಿಂದಿದ್ದುದು ಗಂಡನ ತಪ್ಪೊ? ಇಲ್ಲವೆ ಮೊದಲಿನ ಹೆಂಡತಿಯನ್ನು ಜೀವದಿಂದಿರಗೊಡದಂತೆ ಗಂಡನನ್ನು ಪ್ರೋತ್ಸಾಹಿಸಲು ಇದೊಂದು ಹೊಸ ಹಂಚಿಕೆಯೊ? ಸಮಾಜ ಸುಧಾರಕರೇನೊ ಇಂತಹ ಕಾಯಿದೆಗೆ ಹೆದರುವುದಿಲ್ಲವೆಂದು ನಮಗೆ ಗೊತ್ತು. ಸಮಾಜ ಸುಧಾರಕರ ದೃಷ್ಟಿಯಿಂದ ಇಂದು ನಮ್ಮ ಹೆಂಗಸರಲ್ಲಿ ಜೀವವಾಗಲಿ ಚೈತನ್ಯವಾಗಲಿ ಇರುವುದೆ ಇಲ್ಲ. ಈ ಕಾರಣವನ್ನು ತೋರಿಸಿ ಸಮಾಜಸುಧಾರಕನು ಬೇಕಾದಷ್ಟು ಹೆಂಡಂದಿರನ್ನು ಮದುವೆಯಾಗಬಹುದು. ಆದರೆ ಮಿಕ್ಕವರ ಪಾಡೇನು? ಸಾಮಾನ್ಯ ಗಂಡನ ಗತಿ ಏನು? ಈ ಜನ್ಮದಲ್ಲಿ ಇರುವಾಗ ಸುಖವೂ ಸಿಕ್ಕಲಿಲ್ಲ, ನೋಕರಿಯೂ ಸಿಕ್ಕಲಿಲ್ಲ; ಮುಂದೆ ಸತ್ತಮೇಲಾದರೂ ಸ್ವರ್ಗದೊರಕಲೆಂದರೆ ಮನೆಯ ಹೆಂಡತಿಗೆ ಮಕ್ಕಳಿಲ್ಲ; ಗಂಡುಮಗನಿಗಾಗಿ ಇನ್ನೊಂದು ಮದುವೆಯನ್ನು ಮಾಡಿಕೊಳ್ಳಬೇಕೆಂದರೆ ಕಾಯಿದೆಯ ಪ್ರತಿಬಂಧ! ಇದೆಂತಹ ಅನ್ಯಾಯ? ಇದಲ್ಲದೆ ಬೇಕಾದಷ್ಟು ಹೆಂಡಂದಿರನ್ನು ಮದುವೆಯಾಗುವುದು ಹಿಂದುಧರ್ಮದಲ್ಲಿ ಗಂಡನಿಗೆ ಮೂಲಭೂತ ಹಕ್ಕು ಎನಿಸಿದೆ. ತ್ರಿಕಾಲಾಬಾಧಿತವಾದ ಧರ್ಮವು ದಯಪಾಲಿಸಿದ ಅಧಿಕಾರವನ್ನು ಕಸಿದುಕೊಳ್ಳಲು ಮಾನವಮಾತ್ರನಿಗೆ ಶಕ್ಯವಿದೆಯೆ? ಎಲ್ಲಿದೆ ನಮ್ಮ ಸನಾತನಧರ್ಮಾಭಿಮಾನ? ಆದುದರಿಂದ, ಗಂಡಂದಿರೆ, ಸನಾತನಧರ್ಮವೀರರೆ, ಸ್ವಾತಂತ್ರ್ಯಸಂಗ್ರಾಮದ ಸೈನಿಕರೆ, ಏಳಿರಿ, ಎದ್ದು ಇದಿರಾಗಿರಿ.

ಗಂಡನಿಗೆ ಸಾವಿರಾರು ವರ್ಷಗಳಿಂದಿದ್ದ ಸ್ವಾತಂತ್ರ್ಯ ಕಳೆಯುವುದಂತೂ ಇರಲಿ; ಹೆಂಡತಿಗೆ ಎಂದಿಗೂ ಇಲ್ಲದ ಸ್ವಾತಂತ್ರ್ಯ ದೊರೆಯುವಂತಿದೆ. ಕೆಲವು ಸಂದರ್ಭಗಳಲ್ಲಿ ಗಂಡನನ್ನು ಬಿಟ್ಟು ಕೊಡುವ ಅಧಿಕಾರವಿದೆ ಹೆಂಡತಿಗೆ ಈ ಕಾಯಿದೆಯಿಂದ. ಒಳಿತೆನ್ನಿ!– ಇನ್ನೊಬ್ಬ ಗಂಡನನ್ನು ಮದುವೆಯಾಗುವ ದುರಧಿಕಾರವೂ ಈಕೆಗೆ ಕೊಡಲ್ಪಡುವುದಿದೆ! ಪಾಪ! 'ಪಾಪ' ಎಂದರೆ ಗಂಡನಿಗಾಗಿ ನಮ್ಮ ಕನಿಕರ. ಇಂದು ಅಲ್ಲಲ್ಲಿ ಜಾರಿಯಲ್ಲಿ ಬರಲಿರುವ ಟೆನನ್ಸಿ ಬಿಲ್ಲಿನ ಅನ್ಯಾಯಕ್ಕಾಗಿ ಕೂಗುವ ಜಮೀನುದಾರರು ಈ 'ಗಂಡಾಂತರ ಬಿಲ್ಲಿ'ನ ಅನ್ಯಾಯವನ್ನು ಲಕ್ಷ್ಯಕ್ಕೆ ತಂದುಕೊಂಡಿರುವರೋ? ದುಡಿಯು

ವವನು ಗಂಡನು, ದುಡ್ಡು ಗಳಿಸುವವನು ಗಂಡನು; ವ್ಯವಹಾರಹ ಈಚು-ಪೇಚುಗಳಿಗೆ ಕಾಯಿದೆಯಿಂದ ಪಕ್ಕಾಗುವವನು ಗಂಡನು; ಅವನಿಗೆ ಸಹಾಯವಾಗುವುದನ್ನು ಬಿಟ್ಟು ಅವನನ್ನು ಬಿಟ್ಟುಕೊಡುವ ಅಧಿಕಾರ ಹೆಂಡತಿಗೆ! ಕಷ್ಟಸಾಧ್ಯವು ಗಂಡನಿಗಾದರೆ ಇಷ್ಟಸಿದ್ಧಿಯು ಹೆಂಡತಿಗೆ! ವ್ಯೆಮುರಿಯುವುದು ಗಂಡನಾದರೆ ಮೇಲ್ಮೆರೆಯುವುದು ಹೆಂಡತಿಯ ಭಾಗ್ಯ! ಜಮೀನಿಗಾಗಿ ಅಧಿಕಾರ ದೊರೆಯುವ ರೈತನು ತುಸುಮಟ್ಟಿಗಾದರೂ ಕಷ್ಟಪಟ್ಟಿರುತ್ತಾನೆ; ಆದರೆ ಸ್ವಾತಂತ್ರ್ಯಕ್ಕಾಗಿ ಅಧಿಕಾರ ದೊರೆಯುವ ಹೆಂಡತಿ ಎಳ್ಳಷ್ಟಾದರೂ ಕಷ್ಟ ಪಡುವವಳಲ್ಲ! ಬಡರೈತನನ್ನು ಬೇಕಾದಾಗ ಬಿಡಿಸುವ ಜಮೀನುದಾರರ ಮೇಲೆ ಇಷ್ಟೊಂದು ಕೋಪವೇಕೆ? ಬಡಗಂಡನನ್ನು ಬೇಕಾದಂತೆ ಬಿಡಲು ಹೆಂಡತಿಗೆ ಅಧಿಕಾರಕೊಡಲು ಇಷ್ಟೊಂದು ಅನುಕಂಪವೇಕೆ?

ಸಾಕು; ದೃಷ್ಟಾಂತಗಳೂ ಸಾಕು, ವಿವೇಚನೆಯೂ ಸಾಕು. ಈಗ ಬರಲಿರುವ ಈ 'ಗಂಡಾಂತರ' ಮಸೂದೆಗಳು ತತ್ತ್ವತಃ ಹೇಗೆ ವಿಘಾತುಕವಾಗಿವೆ ಎಂಬುದು ಇಷ್ಟರಲ್ಲಿಯೆ ವಾಚಕರಿಗೆ ತಿಳಿದಿರಲು ಸಾಕು. ಈ ವಿಘಾತುಕ ತತ್ತ್ವವನ್ನು ಎದುರಿಸಲೇ ಬೇಕು; ಎದುರಿಸಲು ಉಪಾಯಗಳನ್ನು ಶೋಧಿಸಲೇಬೇಕು.

ಅಥವಾ ಎರಡನೆಯವರಿಗೆ ಉಪದೇಶ ಮಾಡುವುದೇಕೆ? ನಾವಾಗಿಯೆ ಕೆಲವು ಉಪಾಯುಗಳನ್ನು ಸೂಚಿಸುತ್ತೇವೆ. ಮೊದಲ ಮಾತೆಂದರೆ ಗಂಡಂದಿರೆಲ್ಲರೂ ಒಂದೆಡೆಸೇರಿ ಒಂದು 'ಗಂಡ-ಸಂಘ' ವನ್ನು ಸ್ಥಾಪಿಸಬೇಕು. 'ಒಬ್ಬ ಹೆಂಡತಿ ಜೀವದಿಂದಿರಲಾರದ ಗಂಡನಿಗೆಯೆ ಈ ಸಂಘದ ಸದಸ್ಯನಾಗುವ ಅಧಿಕಾರವಿದೆ' ಎಂದು ಮೊದಲನೆಯ ನಿಯಮವನ್ನು ಸಾರಬೇಕು. (ವಿ. ಸೂ. ಅನೇಕ ಹೆಂಡಂದಿರು ಜೀವಿಸುತ್ತಿರಬೇಕೆಂದಾಗಲಿ ಎಲ್ಲ ಹೆಂಡಂದಿರು ಸತ್ತಿರಬೇಕೆಂದಾಗಲಿ ಮೇಲಿನ ನಿಯಮದ ತಾತ್ತ್ವಿಕ ಅರ್ಥವಾಗುವುದು). ಈ ಸಂಘದ ಉದ್ದಿಶ್ಯವೇನು? ಅರ್ಥಾತ್, ಗಂಡಂದಿರ ಅಧಿಕಾರ-ಬಾಧ್ಯತೆಗಳ ಪ್ರಚಾರ ಮತ್ತು ಸಂರಕ್ಷಣೆ. ಪ್ರತಿಯೊಂದು ಚುನಾವಣೆಯಲ್ಲಿ ಈ ಸಂಘವು ತನ್ನ ಸದಸ್ಯರನ್ನು ಹುರಿಯಾಳಾಗಿ ನಿಲ್ಲಿಸಬೇಕು. ಇಷ್ಟೇಕೆ? ಸ್ವಲ್ಪಾವಧಿಯಲ್ಲಿ ಈ ಸಂಘದ ಸದಸ್ಯರೆ ಮಂತ್ರಿಮಂಡಳವನ್ನು ಹೂಡುವಂತೆ ಮಾಡಬೇಕು. ಅದರಿಂದ ಸಂಘಕ್ಕಷ್ಟೇ ಅಲ್ಲ, ದೇಶಕ್ಕೂ ಹಿತವಿದೆ.

ಮಂತ್ರಿಯು. ಈ ಸಂಘದ ಸದಸ್ಯನಿದ್ದ ಮೇಲೆ ಅವನಿಗೆ ಮನೆಯಲ್ಲಿ ಹೆಂಡತಿಯೆ ಇಲ್ಲವೆಂದಾಗಲಿ ಇಲ್ಲವೆ ಇಬ್ಬರು (ಮತ್ತು ಹೆಚ್ಚಾಗಿ) ಹೆಂಡಂದಿರಿರುವರೆಂದಾಗಲಿ ಅರ್ಥವಾಗುವುದು. ಈ ಮಹತ್ತ್ವವೇನೆಂದು ಬೇರೆಯಾಗಿ ಹೇಳಬೇಕೆ? ಹೆಚ್ಚಾದ ಹೆಂಡಂದಿರ ಕಾಟತಪ್ಪಿಸುವುದಕ್ಕೆ, ಇಲ್ಲವೆ ಹೆಂಡತಿ ಇಲ್ಲದೆ ರಣ-ಗುಡುವ ಮನೆಯನ್ನು ತಪ್ಪಿಸುವುದಕ್ಕೆ ಮಂತ್ರಿಯು ಯಾವಾಗಲೂ ತನ್ನ ಮಂತ್ರಿತನದ ಕಾರ್ಯದಲ್ಲಿಯೆ ತೊಡಗುವನು; ಇದು ಖಂಡಿತ, ನಿಶ್ಚಿತ, ಅನಿರ್ವಾಹದ ವಿಧಿಲಿಖಿತ. ಮಂತ್ರಿಯು ಇಷ್ಟೊಂದು ಕಾರ್ಯನಿರತನಾದರೆ ದೇಶದ ಆಡಳಿತವು ಸುವ್ಯವಸ್ಥಿತವಾಗದೆ ಬಿಟ್ಟೀತೆ? ನಿಜವಿದ್ದ ಮಾತೆಂದರೆ ಏಕಪತ್ನೀವ್ರತಸ್ಥರಾದ ಮಂತ್ರಿಗಳೇ ಇಂತಹ 'ಗಂಡಾಂತರ' ಕಾಯಿದೆಗಳಿಗೆ ಕಾರಣೀಭೂತರಾಗಿದ್ದಾರೆಂದು ಸಂಶಯಬರುವಂತಿದೆ. ಯಾಕೆಂದು ಬಿಚ್ಚಿ ಹೇಳಬೇಕೊ? ಕ್ಷಮೆ ಇರಲಿ; ನಾವು ಪರತಂತ್ರವೃತ್ತಿಯವರಾಗಿದ್ದೇವೆ. ಸ್ವತಂತ್ರಬುದ್ಧಿಯವರಾದ ವಾಚಕರಿಗೆ ತಾನಾಗಿಯೆ ತಿಳಿಯುವುದೆಂದೂ ನಮಗೆ ಭರವಸೆ ಇದೆ. ಅಂತೂ 'ಗಂಡ-ಸಂಘ' ಸ್ಥಾಪನೆಯೂ ಚುನಾವಣೆಯ ಸೂತ್ರವನ್ನು ಕೈಯಲ್ಲಿರಿಸುವುದೂ ಮೊದಲ ಉಪಾಯ ಎಂದಂತಾಯಿತು.

ಇನ್ನು ಅಧಿಕಾರ—ಬಾಧ್ಯತೆಗಳ ಸಂರಕ್ಷಣೆಯ ವಿಷಯ. ಸಂರಕ್ಷಣೆ ಮಾಡುವುದು ಹೇಗೆ? ಪರಿಷತ್ತುಗಳನ್ನು ಕೂಡಿಸಿ ಗೊತ್ತುವಳಿಗಳನ್ನು ಸ್ವೀಕರಿಸುವುದರಿಂದಾಗಲಿ, ಮಂತ್ರಿಗಳಿಗೆ ಮನವಿಗಳನ್ನು ಕಳುಹಿಸುವುದರಿಂದಾಗಲಿ ಇದು ನೀಗದ ವಿಷಯ. ಎಂತಹ ಹೋರಾಟದ ಪ್ರಸಂಗ ಬಂದೀ-ತೆಂದು ಹೇಳಲು ಬರುವಂತಿಲ್ಲ. ಸೆರೆಮನೆಯ ಕತ್ತಲೆಯೂ ಕವಿಯುಬಹುದು, ಅಡುಗೆ ಮನೆಯ ಹೊಗೆಯೂ ಮುಸುಕಬಹುದು; ಲಕ್ಷಾವಧಿ ಲಾಠಿಗಳ ಪ್ರಹಾರವಾದರೂ ಆದೀತು, ಲಟ್ಟಣಿಗೆ—ಸೌಟುಗಳು ಹಾರಾಡುವುದೂ ಆದೀತು; ಒಟ್ಟಾರೆ, ಹೋರಾಟವೆ ಆಗಲಿ ಹಾರಾಟವೆ ಆಗಲಿ-ಎಂತಹದು ಬಂದೀತೆಂದು ಹೇಳಲಿಕ್ಕಾಗುವುದಿಲ್ಲ. ಅದಕಾಗಿ ಸಂಘವು ಮೊದಲಿನಿಂದಲೂ ಸಿದ್ಧತೆಯಲ್ಲಿರಬೇಕು; ಅರ್ಥಾತ್, ಒಂದು ಸೈನಿಕದಲವನ್ನು ಸಜ್ಜುಪಡಿಸಿಕೊಳ್ಳಬೇಕು. ಈ ಸೈನಿಕದಲದಲ್ಲಿ ನಮ್ಮ ಎದುರಾಳಿಗಳು ಯಾರಾಗಬಹುದೆಂಬುದನ್ನು ಲಕ್ಷ್ಯದಲ್ಲಿಟ್ಟುಕೊಂಡು—ತರುಣರನ್ನೆ ಸೇರಿಸಿಕೊಳ್ಳಬೇಕು.

ತರುಣರನ್ನು ಸೇರಿಸಿಕೊಳ್ಳುವುದರಲ್ಲಿ ಇನ್ನೊಂದು ಲಾಭವಿದೆ. ಇಂದಿನ ತರುಣರೆಂದರೆ ಸಾಮಾನ್ಯವಾಗಿ ನಿರುದ್ಯೋಗಿ (unemployed) ಗಳೆ. ಇವರು ಸಂಘದ ಸೈನಿಕರಾಗಬೇಕಾದರೆ ಮೊದಲು ಸಂಘದ ಸದಸ್ಯರಿರಬೇಕು, ಅರ್ಥಾತ್ ಮೊದಲ ನಿಯಮವನ್ನು ಅನ್ವಯಿಸುವಂತೆ ಮದುವೆಯಾದವರಿರ ಬೇಕು. ಆದರೆ ನಿರುದ್ಯೋಗಿಗಳ ಮದುವೆಯಾಗುವುದೆಂತು? ಆದರೂ 'ಒಬ್ಬ ಹೆಂಡತಿ ಜೀವದಿಂದಿರಲಾರದ' ಎಂಬ ನಿಯಮವನ್ನು ಅನ್ವಯಿಸು ವುದೆಂತು?—ಎಂದು ಯಾರಾದರೂ ಕೇಳಬಹುದು. (ಕೇಳಿದರೆಯೆ ನಮಗೆ ಸಂತೋಷ, ಯಾಕೆಂದರೆ ನಮ್ಮ ಉಪಾಯದ ಚಾತುರ್ಯವು ಈಗ ಕಂಡು ಬರುವುದು) ಅದಕ್ಕೆ ನಮ್ಮ ಉತ್ತರ ಹೀಗೆ; ಈ ನಿರುದ್ಯೋಗಿ ತರುಣರು ಮದುವೆಯಾಗುವುದೆಂದರೆ ನಮ್ಮ ಸಂಘವು ಘೋರವಾದ ಸತ್ಯಾಗ್ರಹ ಹೂಡಿ ದಂತೆ; ಆದುದರಿಂದ ಧರ್ಮಾಂತರ ತಾಳಿದ ತಂಡಗಳನ್ನು ಮತ್ತೆ ಹಿಂದು ಧರ್ಮದಲ್ಲಿ ಸೇರಿಸಿಕೊಳ್ಳುವ ಸಂಘಗಳಂತೆ ನಿರುದ್ಯೋಗಿಯಾದ ತರುಣರ ತಂಡಗಳನ್ನು ಗೃಹಸ್ಥಾಶ್ರಮದಲ್ಲಿ ಸೇರಿಸುವ ವ್ಯವಸ್ಥೆಯಾಗಬೇಕು. ಮದುವೆ ಯಾಯಿತು, ಹೆಂಡತಿ ಮನೆಗೆ ಬರುವಳು, ಆದರೆ ಮನೆಯಲ್ಲೇನಿದೆ? ಯಾಕೆಂದರೆ ಗಂಡನು ನಿರುದ್ಯೋಗಿ! ಹೆಂಡತಿಯು ಗತಿ ಏನು? ಹೀಗಾಗಿ ತರುಣನಿಗೆ ಮತ್ತೊಂದು ಹೆಂಡತಿಯನ್ನು ಮಾಡಿಕೊಳ್ಳಲು ಅವಕಾಶ ದೊರೆ ಯುವುದು. ಆಕೆಗೂ ಆದೇಗತಿ....ಮೂರನೆಯ ಹೆಂಡತಿ, ಆಕೆಗೂ ಅದೇ ಗತಿ........ನೂರನೆಯ ಹೆಂಡತಿ, ಆಕೆಗೂ ಅದೇ ಗತಿ....ಎಲ್ಲ ಹೆಂಡಂದಿರಿಗೂ ಅದೇ ಗತಿ! ಆ ಮೇಲೆಯಾದರೂ ಹೆಂಗಸಿಗೆ ಬುದ್ಧಿ ಬರಲಿ....ಅಥವಾ, ಹೆಂಗಸಿಗೆ ಮೊಳಕಾಲ ಕೆಳಗೆ ಬುದ್ಧಿ ಇದೆ ಎಂದು ಹೇಳುವುದರಿಂದ, ಆ ಬುದ್ಧಿ ಮೇಲೆ ಬರಲಿ ಎನ್ನೋಣ....ಗಂಡನು ಗಳಿಸುವಾಗ ನಡೆವ ಚಲ್ಲಾ ಟವು ಗಂಡನು ನಿರುದ್ಯೋಗಿಯಾದಾಗ ನಡೆಯುವುದಿಲ್ಲವಾದುದರಿಂದಲೆ ನಿರುದ್ಯೋಗಿಗಳಾದ ತರುಣರು ಸತ್ಯಾಗ್ರಹದ ಸೈನಿಕರೆನಿಸುವರು. ಗಂಡನ ಸತ್ಯಾಗ್ರಹವು ಹೆಂಡತಿಗೆ 'ಸತ್ತಾಗ್ರಹ'ವೆನಿಸಿದರೆಯೆ 'ಗಂಡಾಂತರ'ದ ವಿಚಾರವು, ದುಷ್ಟಪ್ರೇರಣೆಯು ತಡೆಯುವುದೆಂದು ನಮ್ಮ ಭರವಸೆ.

ವಾಚಕರೆ, '**ಗಂಡ–ಸಂಘ**'ಸ್ಥಾಪನೆಯಿಂದ ಇನ್ನೂ ಒಂದು ಮಹ- ತ್ಕಾರ್ಯ ಸಾಧಿಸುವಂತಿದೆ. ಯಾವ ಸ್ವಾತಂತ್ರ್ಯತತ್ತ್ವಕ್ಕಾಗಿ ಗಂಡಂದಿರು

ಹೆಣಗಾಡುವರೊ ಅದೇ ಸ್ವಾತಂತ್ರ್ಯತತ್ತ್ವಕ್ಕಾಗಿ ಕಾಂಗ್ರೆಸೂ ಹೆಣಗಾಡುತ್ತಲಿದೆ. ಆದುದರಿಂದ ಕಾಂಗ್ರೆಸ ಸಂಸ್ಥೆಗಳೂ ಗಂಡ-ಸಂಘವೂ ಒಂದರಲ್ಲೊಂದು ಸೇರಬಹುದಾಗಿದೆ. ಇದರಿಂದ ದೇಶಕ್ಕೆ ಎಷ್ಟು ಹಿತವಾಗಬಹುದು? ಇಂದು (ನಮ್ಮಲ್ಲಿ) ಕಾಂಗ್ರೆಸ-ಸಂಸ್ಥೆಗಳು ಜಾತಿ ಕಲಹಕ್ಕೆ ಈಡಾಗಿವೆಯಂತೆ; ಈ ಮಾತು ನಿಜವಿದ್ದರೆ 'ಗಂಡ-ಸಂಘದಲ್ಲಿ ಸೇರುವುದರಿಂದ ಆ ಅನಿಷ್ಟ ಪರಿಹಾರವಾಗುವುದರಲ್ಲಿ ಎಳ್ಳಷ್ಟು ಸಂದೇಹವಿಲ್ಲ, 'ಗಂಡ-ಸಂಘ'ದಲ್ಲಿ ಜಾತಿಯು ಪ್ರವೇಶವೇ ಇಲ್ಲ. ನಿಯಮಕ್ಕನುಸರಿಸಿ ಗಂಡನಾಗಿದ್ದರೆ ಸಾಕು, ಆವನು ಯಾವ ಜಾತಿಯವನೆ ಇರಲಿ, ಸದಸ್ಯನಾಗಬಹುದು.

ಹೆಚ್ಚಿನ ಚರ್ಚೆ ಏಕೆ? ನಾವು—ಮಾತಿನಲ್ಲಿ ಹೊತ್ತು ಕಳೆಯುವಷ್ಟರಲ್ಲಿಯೆ 'ಗಂಡಾಂತರ' ಕಾಯಿದೆ ಜಾರಿಯಲ್ಲಿ ಬಂದೀತು. ಕಾರಣ; ಕೂಡಲೆ ಸಜ್ಜಾಗೋಣ, ಬಂದ ಗಂಡಾಂತರವನ್ನು ಸಕಾಲದಲ್ಲಿಯೆ ಸದೆಬಡೆಯೋಣ; ಇಷ್ಟೇ ನನ್ನ ಬೇಡಿಕೆ.

ನಾನು ಸೂಚಿಸಿದ ಉಪಾಯಗಳನ್ನು ಸ್ವೀಕರಿಸುವಂತೆಯೂ, ನಾನು ಬರೆದ ಲೇಖವನ್ನು ಹೆಂಡಂದಿರಿಗೆ ತಿಳಿಯದ ಹಾಗೆ ಓದುವಂತೆಯೂ ದೇವರು ನಿಮಗೆ ಸದ್ಬುದ್ಧಿ ಶಕ್ತಿ—ಸಾಹಸಗಳನ್ನು ದಯಪಾಲಿಸಲಿ.

ಆಗಸ್ಟ '೩೮

**ಒಂದೇ ಹೆಂಡತಿವ್!**

---

# ಮದುವೆಯ ಮೀಮಾಂಸೆ

ಸದ್ಯಕ್ಕೆ ಆಳಿಕೆಯಲ್ಲಿದ್ದ ಏಳು ಕಾಂಗ್ರೆಸ್ ಮಂತ್ರಿಮಂಡಲಗಳಲ್ಲಿ ಮದರಾಸು—ಮಂತ್ರಿಮಂಡಲವು ಅತ್ಯಂತ ಪ್ರತಿಭಾಸಂಪನ್ನವಾದುದಂತೆ. ಅದಕಾಗಿ ಜನತೆಯ ಲಕ್ಷ್ಯವೆಲ್ಲ ಆ ಪ್ರಾಂತೀಯ ಸರಕಾರದ ಕಾರ್ಯ-ಭಾರದ ಕಡೆಗೆಯೆ ಹೆಚ್ಚಾಗಿ ಇದ್ದರೆ ಅದರಲ್ಲಿ ಆಶ್ಚರ್ಯವೆನಿಸುವ ಕಾರಣವಿಲ್ಲ. ನಮ್ಮ ಲಕ್ಷ್ಯವೂ ಆಕಡೆಗೆಯೆ ಹೋಗಿದ್ದರೆ ನಮ್ಮನ್ನು ಯಾರೂ

ಉಪದ್ವ್ಯಾಪಿ ಎಂದು ಅಲ್ಲಗಳೆಯುವ ಕಾರಣವೂ ಇಲ್ಲ. ಹೇಳುವ ಕಾರಣ ವಿಷ್ಟೆ. ಸದ್ಯಕ್ಕೆ ನಮ್ಮ ಲಕ್ಷ್ಯವು ಆ ದ್ರಾವಿಡೀ ಸರಕಾರದ ಒಂದು ನಿಯೋಜನೆಯ ಕಡೆಗೆ ಎಳೆದಿದೆ. ಆ ನಿಯೋಜನೆಯನ್ನು ಕೂಲಂಕಷವಾಗಿ ಚರ್ಚಿಸಿದರೆ, ಆ ಮಂತ್ರಿಮಂಡಲದ ಪ್ರತಿಭೆಯ ನಿದರ್ಶನವು ತಮಗೂ ದೊರೆಯಬಹುದೆಂಬ ಮನೀಷೆಯಿಂದ ನಾನು ಈ ಸಾಹಸಕ್ಕೆ ತೊಡಗಿದ್ದೇನೆ.

ಆ ನಿಯೋಜನೆ ಯಾವುದು ? ಅದಕ್ಕೆ ನಾವು '**ಕಾಮನ ಬಿಲ್ಲು**' ಎಂದು ಹೆಸರಿಟ್ಟಿದ್ದೇವೆ. ಯಾಕೆನ್ನುವಿರಾ? ಕಾಮದೇವನ ವ್ಯವಹಾರಕ್ಕೆ ಸಂಬಂಧಿಸಿದೆ ಆ 'ಬಿಲ್' (Bill = ಮಸೂದೆ) ಉ. ಪ್ರತಿಯೊಂದು ಮದುವೆಯ ಮೇಲೆ ಇಂತಿಷ್ಟು ಕರವನ್ನು ಹೇರಬೇಕೆಂದು ಆ ಬಿಲ್ಲಿನ ಉದ್ದೇಶ. ಆ ಕರವನ್ನು ಹೊಸ ದಂಪತಿಗಳು ಕೊಡಬೇಕೊ, ಇಲ್ಲವೆ ಹೆಣ್ಣಿನವರೊ, ಇಲ್ಲವೆ ಗಂಡಿನವರೊ—ಎಂಬ ತೊಡಕು ಹೊರಡುವಂತಿಲ್ಲ. ಕಾಯಿದೆಯ ಪ್ರಕಾರ ಯಾರು ಕೊಡಬೇಕೆಂದಿದ್ದರೂ ಕೊನೆಗೆ ಅದನ್ನು ಕೊಡಬೇಕಾಗುವುದು ಕನ್ಯಾಪಿತನೆ. ವರನಾಗಲಿ, ವರನ ತಂದೆಯಾಗಲಿ ಕೊಡಬೇಕೆಂಬ ನಿಯಮವಿದ್ದರೂ ವರದಕ್ಷಿಣೆ—ವರೋಪಚಾರ—ಬೀಗಿತ್ತಿ ಕಳಸಗಿತ್ತಿ ಮೊದಲಾದ 'ಬಾಬು'ಗಳ ಯಾದಿಯಲ್ಲಿ ಈ 'ಕರಗಿತ್ತಿ'ಯೊಂದು ಸೇರಿ, ಕೊನೆಗೆ ಕನ್ಯೆಯ ತಂದೆಯೆ ಕೊಡುವನು.

ಯಾರು ಕೊಡಬೇಕೆಂಬುದನ್ನು ತುಸು ತಾತ್ತ್ವಿಕವಾಗಿ ಚರ್ಚಿಸುವಾ. ದೇಶದ ಉದ್ಯೋಗ—ವ್ಯವಸಾಯ—ವ್ಯಾಪಾರ—ಐಶ್ವರ್ಯಗಳ ಮೇಲೆ ಕರವನ್ನು ಹೇರುವುದೇನೊ ಯೋಗ್ಯವೆ ಆಗಿದೆ. ಆದರೆ ನಮ್ಮ ದೇಶದಲ್ಲಿ (ಇಲ್ಲವೆ ಮದರಾಸು ಪ್ರಾಂತದಲ್ಲಿ ಎನ್ನಿರಿ) ಮದುವೆಯು ಉದ್ಯೋಗವೆ ? ಪ್ರಶ್ನೆ ಕೇಳಿದ್ದೇ ತಪ್ಪಾಯಿತಲ್ಲ ಎನಿಸುವಂತಿದೆ; 'ಅಹುದು' ಎಂದು ಉತ್ತರ ಕೊಡಬೇಕೆನಿಸುತ್ತಿದೆ. ಶಿಕ್ಷಣವಾದ ಮೇಲೆ ಮದುವೆಯಾಗಲೇಬೇಕು ಎಂಬುದು ಪರಂಪರಾಪ್ರಾಪ್ತವಾದ ಧರ್ಮವಷ್ಟೆ ಅಲ್ಲವೆ, ಇಂದಿನ ವ್ಯವಹಾರವೂ ಆಗಿದೆ.

'ನಿಮ್ಮ ಹುಡುಗ B. A., ಆದನೇನು?'
'ಆದನೈಷಾ ಕೊನೆಗೆ!'

'ಈಗ ಏನ್ಮಾಡ್ತಾನ?'
'ಏನಿಲ್ರಿ, ಮನೆಯೊಳಗೇ–
'ಮದಿವೆ ಆಗಿದೆಯೇನು?'
'ಇಲ್ಲ'



'ಛೆ—ಛೆ— ಛೆ! ಹಾಂಗ ಮಾತ್ರ ಮಾಡಬ್ಯಾಡ್ರಿ ನೋಡ್ರಿ. ಹುಡುಗುರು ನಿರೋದ್ಯೋಗ ಆದ್ರೂ ಅಂದ್ರೆ ವ್ಯಸನಕ್ಕೇ ಕೈಹಾಕ್ತಾವೆ. ಹಾಗ ಸುಮ್ಮ ಕೂಡಗೊಡ ಬ್ಯಾಡ್ರಿ. ಮದಿವೆ ಮಾಡಿಕೊಡಿರಿ!'

ಮೇಲಿನ ಸಂಭಾಷಣೆ ನಮ್ಮ ದಿನದ ವ್ಯವಹಾರದಲ್ಲಿ ಪ್ರತಿಯೊಬ್ಬ ಸಂಸಾರಿಗನ ಅನುಭವಕ್ಕೆ ಬಂದಿರಲು ಸಾಕು. ಅಂತೂ ಕೊನೆಗೆ ಹುಡುಗನ ಮದುವೆ ಆಗುವುದು.

'ಈಗ ನಿಮ್ಮ ಹುಡುಗ ಏನ್ಮಾಡ್ತಾನ!'
'ಏನಿಲ್ಲ. ಮದಿವೆ ಆಗೇದ. ಮಕ್ಕಳಾಗ್ಯಾವ. ಮನೆ ಹಿಡಿದ ಕೂತಾನ.'

'ಸಂಸಾರದ ಉದ್ಯೋಗಕ್ಕೆ ತೊಡಗಿದ ಅನ್ನಿರಿ ಏನಿಲ್ಲ–ಅಂದರೇನು? ಸಂಸಾರಾದ್ರೂ ನಡೆದಿದೆ ಅಲ್ಲ?' ಈ ದೃಷ್ಟಿಯಿಂದ ನೋಡಿದರೆ ಮದುವೆ ನಮ್ಮ ದೇಶದ, ವಿಶೇಷವಾಗಿ ನಮ್ಮ ಭಾವೀಕಂಬದ– ಅಲ್ಲಲ್ಲ– ನಮ್ಮ ಭಾವೀಆಧಾರಸ್ತಂಭದ (ಎಂದರೆ ತರುಣರ) ಉದ್ಯೋಗ ಎಂದು ಹೇಳಲಿಕ್ಕೆ ಏನೂ ಅಡ್ಡಿ ಇಲ್ಲ.

ಇನ್ನೊಂದು ದೃಷ್ಟಿಯಿಂದ ನೋಡಿದರೆ ಮದುವೆ ನಮ್ಮ ದೇಶದ ಒಂದು ಪ್ರಕರ್ಷಾವಸ್ಥೆಯ ವ್ಯವಸಾಯ ಎಂದು ಹೇಳಬಹುದು. ಹೇಗೆ ಜಾತ್ರೆ ಪ್ರದರ್ಶನಗಳಿಂದ ಜನಲಾಭ–ಧನಲಾಭಗಳಾಗುವುವೊ ಹಾಗೆಯೆ ಒಂದು ಮದುವೆಯಿಂದ ಆಗುವುದು. ನೂರಾರು ಆಪ್ತೇಷ್ಟರು (ಇವರಲ್ಲಿ ಎಷ್ಟೋ

ಜನರು ನಮ್ಮ ಆಪ್ತರು ಅಂತ ಇದುವರೆಗೆ ನಮಗೆ ಗೊತ್ತಿಲ್ಲದಿದ್ದರೂ ಅಡ್ಡಿ ಇಲ್ಲ) ನೆರೆಯುವರು. ನೆರೆಹೊರೆಯವರಿಗೆ ಸಂತೋಷ. ನಾಲ್ಕು ದಿವಸ ಎಂದೂ ಕಾಣದ ಊಟ, ವಾದ್ಯ, ಓಲಗ, ಇದಲ್ಲದೆ ಸಾಹುಕಾರಿಕೆಯಲ್ಲಾದರೂ ಮದುವೆಗೆ ಇದ್ದಷ್ಟು ಪತ್ತು ಮತ್ತಾವುದಕ್ಕೂ ಇಲ್ಲ. ಮಕ್ಕಳ ಶಿಕ್ಷಣಕ್ಕೆಂದು ಬೇಡಿದರೆ ದೊರೆಯದ ಸಾಲ ಮಗಳ ಮದುವೆಗೆ ಎಂದರೆ ದೊರೆಯುವದು. ಸಾಹುಕಾರನಾದರೇನು—ಅವನಿಗೆ ಕರುಳು ಇಲ್ಲವೆ? ಮದುವೆಯಂತಹ ಧರ್ಮದ ಕೆಲಸಕ್ಕೆ ಸಾಲ ಇಲ್ಲ ಎನಬಹುದೆ? ಇದಲ್ಲದೆ ಉತ್ಸವದ ಕೆಲಸ. ಎಲ್ಲರಿಗೂ ಸಂತೋಷ. ನೀವು ಬೇಡಿದಷ್ಟು ಸಾಲ ಅವನು ಕೊಡುವುದು, ಅವನು ಬೇಡಿದಷ್ಟು ಬಡ್ಡಿ ನೀವು ಕೊಡುವುದು. ಉತ್ಸವದಲ್ಲಿ ಹೀಗೆ ಎಲ್ಲರಿಗೂ ಸಮಾಧಾನ. ವ್ಯವಹಾರದಲ್ಲಿ ಜನರ ಸಮಾಗಮ. ಸಾಹುಕಾರಿಯಲ್ಲಿ ಪತ್ತು. ಅಂತೂ ವಿವಾಹವು ಒಂದು ವ್ಯವಸಾಯವೆಂದು ಯಾರು ಹೇಳಲಿಕ್ಕಿಲ್ಲ?

ಇನ್ನು ಮದುವೆಯು ನಮ್ಮ ದೇಶದಲ್ಲಿ ವ್ಯಾಪಾರ ಎಂಬುದನ್ನು ಹೆಚ್ಚಾಗಿ ವಿವರಿಸಿ ಹೇಳುವ ಕಾರಣವಿಲ್ಲ. ಮಾನವನು ಅಸಂಸ್ಕೃತನಾಗಿದ್ದ ನಮ್ಮ ಪುರಾಣಕಾಲದಲ್ಲಿ ಮದುವೆಯು ಹೀಗೆ ಸಾಮಾಜಿಕ ಸ್ವರೂಪದ್ದಾಗಿದ್ದಿಲ್ಲ. ಎಷ್ಟೋ ಉದಾಹರಣೆಗಳಿಂದ ಇದನ್ನು ಸಿದ್ಧಮಾಡಿ ತೋರಿಸಬಹುದು; ಹೀಗೆ ಒಬ್ಬ ರಾಜನಿದ್ದಾನೆನ್ನೋಣ. ಅವನು ಒಂದು ದಿವಸ ಬೇಟೆಗೆ ಹೋದನು, ಹೋದ–ಹೋದ – ಹೋದ – ಹೋಗಿಯೆ ಬಿಟ್ಟ! ಹೋದವನು ತಿರುಗಿ ಬರಲೇ ಇಲ್ಲ! ಅವನ ಸೈನ್ಯಪರಿವಾರಕ್ಕೆ ಹೆದರಿಕೆಯಾಗಿ ಅವರು ಎಲ್ಲ ಕಡೆ ಶೋಧಿಸುವರು. ಇನ್ನೊಂದು ಕಡೆ, ಒಂದು ಸುಸ್ವರೂಪ ಕನ್ಯೆ. ಅವಳೂ ಆ ದಿವಸ ಹೂಗಳನ್ನಾಯ್ದುಕೊಳ್ಳಲು ಹೋದಳು. ಹೋದ-ಹೋದ–ಹೋದ–ಹೋದಳೆ ಹೋದಳು! ಹೋದವಳು ತಿರುಗಿ ಬರಲೇ ಇಲ್ಲ! ಆಕೆಯ ವೃದ್ಧತಾಯ್ತಂದೆಗಳಿಗೂ ತರುಣ ಸಹೋದರರಿಗೂ ಹೆದರಿಕೆಯಾಗಿ ಅವರೂ ಎಲ್ಲ ಕಡೆ ಶೋಧಿಸುತ್ತಾರೆ. ಸೈನ್ಯದವರು ಎಚ್ಚರದಪ್ಪಿ ಬಿದ್ದ ರಾಜನನ್ನು ನೋಡುವರು; ಮಾತಾಪಿತೃ-ಬಾಂಧವರು ಎಚ್ಚರದಪ್ಪಿ ಬಿದ್ದ ಮಗಳನ್ನು ನೋಡುವರು. ಸಾಂತ್ವನೋಪಚಾರಗಳನಂತರ ರಾಜನು ಕಣ್ದೆರೆದು–'ಹಾ! ಹುಡುಗೀ!' ಎನ್ನುವನು; ಹುಡುಗಿ ಕಣ್ದೆರೆದು 'ಹಾ! ರಾಜಾ!' ಎನ್ನುವಳು. ಆಯಿತು. ಇದೇ

ಮಂತ್ರ, ಇದೇ ವಾದ್ಯ, ಇದೇ ಕ್ಷೇತ್ರ. ಮದುವೆ ಆಗಿಯೆ ಬಿಟ್ಟಿತು. ಇನ್ನೊಂದು ಉದಾಹರಣೆ; ಒಬ್ಬ ಹುಡುಗ ಕವಣೆ ಬೀಸುತ್ತ ನಡೆದಿದ್ದಾನೆ.



ಎದುರಿನಿಂದ ಹುಡುಗಿಯೊಬ್ಬಳು ನದಿಗೆ ಬಾವಿಗೆ ಕೊಡ ತೆಗೆದುಕೊಂಡು ಹೊರಟಿದ್ದಾಳೆ ಕವಣೆ ಸುಂಯ್ಯ್ ಅಂದಿತು. ಕಲ್ಲು ಹಕ್ಕಿಯ ಕಣ್ಣಿನಲ್ಲಿ ನೆಟ್ಟಿತು; ಹುಡುಗ ಹುಡುಗಿಯ ಕಣ್ಣಿನಲ್ಲಿ ನಟ್ಟನು. ಆಯಿತು ಮದುವೆ! ಹೀಗೆ ಮದುವೆ ವೈಯಕ್ತಿಕವಿದ್ದಿತು, ಸ್ವಾರ್ಥಘೋರಣೆಯದಾಗಿದ್ದಿತು. ಇಂದು ಹಾಗೆ ಇಲ್ಲ. ಇಂದಿನ ಮದುವೆಯ ಹೂಡುವಿಕೆಯನ್ನು ನೋಡಬೇಕಾದರೆ ಮಾರ್ಕೆಟಿಗೆ ಹೋಗಬೇಕು. ಎರಡೂ ಕಡೆ ಎರಡು ಕುಟುಂಬಗಳೂ ಅವರ ಪರಿವಾರವೂ ಇಬ್ಬಣವಾಗಿ ಕುಳಿತಿರುತ್ತವೆ. ನಗದು ಎಷ್ಟು—ನೋಕರಿ ಎಂತಹದು — ಸೀರೆ ಎಷ್ಟು ಜನರಿಗೆ ಶಾಲು ಎಷ್ಟು— ಊಟದಲ್ಲಿ ಪಕ್ವಾನ್ನಗಳೆಷ್ಟು — ವಾದ್ಯವು ಬೇಂಡೊ ಬಜಂತ್ರಿಯೊ— ಹೀಗೆ ಅನೇಕ ಜನರ ದೃಷ್ಟಿಯಿಂದ ಅನೇಕರಿಗಾಗಿ ಸಂತೂಕ ನೋಡಿಕೊಂಡು—ನೀವೆಷ್ಟು ನೀವೆಷ್ಟು ಎಂದು ಲಿಲಾವಿಗೆ ಹಚ್ಚಿ - ಕೊನೆಗೆ ನಿರ್ಧಾರವಾಗುವುದು. ೫೦೦ ರೂ. ವರದಕ್ಷಿಣೆ ಕೊಡುವವರು ಹಾಯ್ ಸ್ಕೂಲು ಆಫೀಸಿನಲ್ಲಿ ವರಗಳನ್ನು ಶೋಧಿಸಬಹುದು; ೧೦೦೦ ದವರು ಕಾಲೇಜಿನ ಆಫೀಸಿನಲ್ಲಿ; ಅದಕ್ಕೂ ಹೆಚ್ಚಿನವರು Law Class, M. A. Class ಗಳಲ್ಲಿ. ಹೇಗೆ ಜವಳೀ, ಕಿರಾಣೀ ಎಂಬ ಭೇದದ ಅಂಗಡಿಗಳಿವೆಯೊ ಹಾಗೆಯೆ. ಏನೇ ಆಗಲಿ—ಮದುವೆಯು ಒಂದು ವ್ಯಾಪಾರ ಎಂಬುದು ಖಂಡಿತ.

ಉಳಿದ ವ್ಯಾಪಾರಗಳಲ್ಲಿದ್ದಂತೆ ಇದರಲ್ಲೂ ದಳ್ಳಾಳಿಗಳಿದ್ದಾರೆ, ದಳ್ಳಾಳಿ-ತನವೂ ಇದೆ.

ಮೇಲಿನ ವಿಚಾರಸರಣಿಯಲ್ಲಿ ಆಶ್ಚರ್ಯವೆನಿಸುವಂತಹದೇನೂ ಇಲ್ಲ. ನಮ್ಮ ಸಮಾಜದಲ್ಲಿ ವರ ಮತ್ತು ಕನ್ಯೆ ಇವರ ನಿಜವಾದ ಬೆಲೆಯನ್ನರಿತು ಕೊಂಡರೆ ನಮ್ಮ ಮಾತು ಯಾರಿಗಾದರೂ ಸಯುಕ್ತಿಕ ಎನಿಸಬಹುದು. ಕನ್ಯೆ ಎಂದರೆ ಕಗ್ಗ ಸರಕು (Raw material). ಆದಕ್ಕೆ ಹೆಚ್ಚಿನ ಬೆಲೆ ಇಲ್ಲ, ವಿಶಿಷ್ಟ ಸ್ಥಾನ ಇಲ್ಲ. ಕಗ್ಗ ಸರಕಿನಿಂದ ಬೇರೆ ಪದಾರ್ಥಗಳನ್ನು ಸಜ್ಜು ಪಡಿಸಿದಮೇಲೆ ಆದಕ್ಕೆ ಬೆಲೆ ಬರುವುದು. ಅದರಂತೆಯೆ ಮದುವೆಯಾದ ಮೇಲೆಯೆ ಕನ್ಯೆಗೆ ಬೆಲೆ, ಬಾಳು ದೊರಕುವುವು ಅದರಂತೆ ವರನೆಂದರೆ ಮೂಲಧನ (Capital) ಇದ್ದಂತೆ. ಮೂಲಧನವಿಲ್ಲದೆ ವ್ಯವಸಾಯವನ್ನು ಕೈಕೊಳ್ಳುವುದು ಹೇಗೆ? ಈ ಮೂಲಧನದ ಒಡೆಯನೆಂದರೆ ವರನ ತಂದೆ. ಆದುದರಿಂದ ವರನ ತಂದೆಯು ನಮ್ಮ ಸಮಾಜದ ಬಂಡವಳಿಗ (Capitalist); ಕನ್ಯೆಯ ತಂದೆಯು ನಮ್ಮ ಸಮಾಜದ ಕೂಲಿಯಾಳು (Wage-earner.) ಹೀಗೆ ಇಂದಿನ ಮದುವೆ ಎಂದರೆ ಬಂಡವಳಿಗರ ಮತ್ತು ಕೂಲಿಕಾರರ ತಿಕ್ಕಾಟದ ಕಾರಣವಾಗುವ ಸಂಭವವಿದೆ. ಇದನ್ನರಿತು ನಾಳೆ ಕನ್ಯಾಪಿತೃ-ಗಳು ಮಿಕ್ಕ ಕೂಲಿಕಾರರಂತೆ ತಮ್ಮದೊಂದು ವ್ಯವಸಾಯಸಂಘವನ್ನು (Trade Union) ಏರ್ಪಡಿಸಿದರೆ? ಸಂಪು (ಮುಷ್ಕರ) ಹೂಡುವ ಹೆದರಿಕೆ ಹಾಕಿದರೆ? ಇಂತಹ ಸಮಯಕ್ಕೆ ಮದರಾಸ್ ಸರಕಾರವು ಮಾಡು ವುದೇನು? ತನಗೆ ಕರ ತಪ್ಪೀತೆಂಬ ಹೆದರಿಕೆಯಿಂದ ಗಂಡಿನವರನ್ನು ಕೂಡಿ ಕೊಂಡು ಸಂಪನ್ನು ಮುರಿಯಲಿಕ್ಕೆ ಯತ್ನಿಸುವದೇ? ಅರ್ಥಾತ್ ಕಾಂಗ್ರೆಸ್ ಸರಕಾರವು ಕ್ಯಾಪಿಟ್ಯಾಲಿಸ್ಟರ ಪಕ್ಷವನ್ನು ವಹಿಸುವ ಸಾಹಸ ವನ್ನು ಮಾಡುವುದೆ?

ಮದರಾಸು ಸರಕಾರವೆ ಆಗಲಿ, ಮತ್ತಾವ ಪ್ರಾಂತದ ಸರಕಾರವೆ ಆಗಲಿ (ಯಾವುದಾದರೂ, ಪಾಪ! ನಮ್ಮವರದೆ ಅಲ್ಲವೆ ಆ ಸರಕಾರ?), ವ್ಯರ್ಥ ತಿಳಿಯದ ಗಲಭೆಯಲ್ಲಿ ಸಿಕ್ಕಿಕೊಳ್ಳಬಾರದೆಂಬ ಸದುದ್ದೇಶದಿಂದಲೆ ನಾವಿದನ್ನು ಬರೆಯುತ್ತಿದ್ದೇವೆ. ಸರಕಾರವೆನಿಸಿದ ಮೇಲೆ ಒಬ್ಬರ ಪಕ್ಷವನ್ನು

(ಅದರಲ್ಲೂ ವೈಯುಬ್ಬಿ ಕೊಬ್ಬಿದ ಧನಮದಾಂಧರ — Capitalists — ಪಕ್ಷವನ್ನು) ವಹಿಸುವುದು ಯುಕ್ತವೆನಿಸುವುದಿಲ್ಲ. ಕರವನ್ನೆ ಹೇರುವುದಾದರೆ ನಿಷ್ಪಕ್ಷಪಾತಬುದ್ಧಿಯಿಂದ ಎಲ್ಲರ ಮೇಲೂ ಹೇರಬೇಕು. ಈ ಸಂದರ್ಭದಲ್ಲಿ ದಲಿತ (Oppressed) ವೆನಿಸಿದ ಕನ್ಯಾಪಿತೃಗಳಿಗೂ ಸವಲತ್ತು-ಸಮಾಧಾನಗಳನ್ನು ತೋರಿಸಬೇಕು. ಉದಾಹರಣಾರ್ಥವಾಗಿ ಒಂದು ಕಾಯಿದೆಯನ್ನು ಪಾಸುಮಾಡಿದರೆಂದು ತಿಳಿಯೋಣ:—ಗವರ್ನ್‌ಮೆಂಟ್ ಸರ್ವಿಸಿನಲ್ಲಿ ಸೇರುವವರು ವರದಕ್ಷಿಣೆಯನ್ನು ಸ್ವೀಕರಿಸಕೂಡದು; ಇಲ್ಲವೆ, ಬಿ. ಎ. ಪರೀಕ್ಷೆಗೆ ಗಣಿತ, ಸಂಸ್ಕೃತ ಮೊದಲಾದ ವಿಷಯಗಳಂತೆ ಒಂದು ಕನ್ಯೆಯನ್ನಾದರೂ ಐಚ್ಛಿಕವಾಗಿ ಆರಿಸಿಕೊಳ್ಳುವಂತಹ ಏರ್ಪಾಟು. (ಅಭ್ಯಾಸಕ್ರಮದಲ್ಲಿ ಕೆಲವು ಕನ್ಯೆಗಳ ಲಿಸ್ಟನ್ನು ಕೊಡಬೇಕು. ಅದರಲ್ಲಿ ಯಾವಳೊಬ್ಬಾಕೆಯನ್ನು—ಒಬ್ಬಾಕೆಯನ್ನೆ ಮಾತ್ರ!—ಆರಿಸಿಕೊಳ್ಳತಕ್ಕದ್ದು. ಉಳಿದ ವಿಷಯಗಳಂತೆ ಈ ಕನ್ಯೆಯ ಅಭ್ಯಾಸವನ್ನು ಎರಡು ವರ್ಷಗಳ ವರೆಗಿಟ್ಟುಕೊಳ್ಳಬೇಕು. ಆ ಮೇಲೆ ಅವಳ ಸಹವಾಸದ ವಿಷಯವಾಗಿ ಆವನನ್ನು ಪರೀಕ್ಷಿಸಬೇಕು. ಅವಳ ಜ್ಞಾನವು ಅವನಿಗಾಗಿದೆ ಎಂದರೆ ಪಾಸ್! Convocation ನಲ್ಲಿ ಮದುವೆ!) ಇಲ್ಲವೆ, ಹೆಣ್ಣುಮಕ್ಕಳ ತಂದೆಗೆ (ಹುಡುಗೆಯರ ಸಂಖ್ಯೆಯ ಪ್ರಮಾಣದಲ್ಲಿ) ಇನ್‌ಕಮ್‌ಟ್ಯಾಕ್ಸನಲ್ಲಿ ರಿಬೇಟ್ (rebate) ಉ; ಇಲ್ಲವೆ, ಒಬ್ಬ Marriage Inspector ನನ್ನು ನಿಯಮಿಸಿ ಅವನ ಅಧ್ಯಕ್ಷತೆಯಲ್ಲಿ ಮದುವೆಯ ವೆಚ್ಚ ನಡೆಸುವುದು; ಇಲ್ಲವೆ, ಊರಿಗೊಂದು ಧರ್ಮಸಾಲೆಯ ಬದಲು ಮದುವೆ ಸಾಲೆಯನ್ನು ಕಟ್ಟಿಸಿ, ಮದುವೆಯ ವಯಸ್ಸಿಗೆ ಬಂದ ಹುಡುಗಿಯರನ್ನೆಲ್ಲ ಸರಕಾರದ ವೆಚ್ಚದಿಂದ ಮತ್ತು ನಿರೀಕ್ಷಣೆಯಿಂದ ಅಲ್ಲಿ ಉಳಿಸಿ, ಉಣ್ಣಿಸಿ, ಬೆಳೆಸಿ, ಮದುವೆಮಾಡಿಸುವುದು; ಇಲ್ಲವೆ, ಇಂತಹ ಯಾವುದಾದರೊಂದು ಕಾಯಿದೆಯನ್ನು ಪಾಸುಮಾಡಿದರೆ ಸಾಕು. ಬಡವರ, ನಿರ್ಗತಿಕರ, ದಲಿತರ ಸೇವೆ ಸಲ್ಲಿಸಿದಂತಾಗುವುದು. ಅದುವೆ ಕಾಂಗ್ರೆಸ್ಸಿನ ಧ್ಯೇಯವೆಂದು ಮಹಾತ್ಮಾ ಗಾಂಧಿಯವರು ಉಪವಾಸದಲ್ಲಿದ್ದಾಗಲೂ ಊಟಮಾಡುತ್ತಿರುವಾಗಲೂ ಸಾರುವುದಿಲ್ಲವೆ?

ಅಥವಾ ಇನ್ನೊಂದು ಸುಲಭೋಪಾಯವಿದೆ; ನಮ್ಮ ದೇಶಕ್ಕೆ ಸಹಾಯಕ, ಪೋಷಕವಾಗುವ ಉಪಾಯವಿದೆ. ಮದುವೆಯಾದವರು ಹಾಳಾಗ

ಲ್ಲೊಲ್ಲರೇಕೆ! ಅವರ ಗೊಡವೆ ಯಾಕೆ? ಆ ಕರ ಯಾಕೆ? ಮಕ್ಕಳನ್ನು ಹಡೆದರೆ ಮಾತ್ರ ಕಠಿಣ ಕಾರಾಗೃಹ ಶಿಕ್ಷೆ ಎಂಬ ಕಾಯಿದೆ ಮಾಡಿದ ರಾಯಿತು—ಮೂವತ್ತೂಕೋಟಿ ದೇವತೆಗಳು ಉಂಡುಮೆರೆಯುವ ಭಾರತದಲ್ಲಿ ಹತ್ತಾರು ಮಾನವರಿಗಾದರೂ ಅನ್ನ ದೊರಕೀತು.

ಸಪ್ಟೆಂಬರ ' ೩೮

---

# ಕೋಳಿಯೆ ನಮ್ಮ ಕಹಳೆ!

'ಕು ಕೂ ಕೂ ೂ, ಕು ಕೂ ಕೂ ೂ, ಕು ಕು ಕೂ ಕೂ ೂ ೂ'! ಕೋಳಿಯ ಕೂಗು! ತಟ್ಟನೆ ಕಣ್ಣೊರಸಿಕೊಂಡೆ. ಅಯ್ಯೊ! ಕಣ್ಣಲ್ಲಿ ಬೊಟ್ಟು ಚುಚ್ಚಿತು! ಯಾಕೆನ್ನುವಿರಾ? ನನ್ನ ಕಣ್ಣು ಮುಚ್ಚಿರಲಿಲ್ಲ, ತೆರೆದೇ ಇದ್ದಿತು; ನಾನು ಮಲಗಿರಲಿಲ್ಲ, ಎಚ್ಚರಾಗಿಯೆ ಇದ್ದೆ! ಆದರೆ ಈ ಹಾಳು ಕೋಳಿಯು ಕೂಗನ್ನು ಕೇಳಿ ಮೋಸ ಹೋದೆ. ಕೋಳಿ ಕೂಗುವುದು ಬೆಳಗಿನಲ್ಲಿ ಎಂಬ ಪಾಠ ಕಲಿತು, ಮರೆಯದ್ದಕ್ಕಾಗಿ ಮೋಸಹೋದೆ. ಕೋಳಿ ಗಾಗಿ ನನ್ನ ಕಣ್ಣಿಗೆ ನೋವಿನ ಉರಿ. ಹೊತ್ತಿಲ್ಲದ ಹೊತ್ತಿನಲ್ಲಿ, ಮಧ್ಯಾಹ್ನದ ಮರುಗಿನಲ್ಲಿ ಕೂಗಿದ್ದಕ್ಕಾಗಿ ಕೋಳಿಯ ಮೇಲೆ ಕೋಪಿಸಿದೆ. ಮರುಕ್ಷಣ ಕಣ್ಣೀರು ಇಳಿದ ಮೇಲೆ, ಕೋಪಜಾರಿ, ತಂಪೇರಿ, ಆಧುನಿಕ ಅಹಿಂಸಾಮಯ ದೃಷ್ಟಿಯಿಂದ ವಿಚಾರ ಮಾಡಿದೆ. ಇದರಲ್ಲಿ ಕೋಳಿಯದೇನು ತಪ್ಪು? ಬಹಳಮಾಡಿ ಕೋಳಿಯ ಮೈಯಲ್ಲಿ ಗುಣವಿರಲಿಕ್ಕಿಲ್ಲ. ಜಾಡ್ಯದಲ್ಲಿ ಬಳಲು ವವನು ಅಪವೇಳೆಯಲ್ಲಿ ಮಲಗಿ ಬಡಬಡಿಸುವಂತೆ, ಕೋಳಿ ಈ ಮಧ್ಯಾಹ್ನ ದಲ್ಲಿ ಕೂಗಿರಬಾರದೇಕೆ? ಕೋಳಿಯು ನಮಗೆಲ್ಲರಿಗೆ—ಭಾರತದ ಬಡವರಿಗೆ—ಅಲಾರಂ ಟೈಂಪೀಸಿದ್ದಂತೆ; ಸೃಷ್ಟಿದೇವತೆ ನಮಗೆ ಕಾಣಿಕೆಯಾಗಿ ಕೊಟ್ಟ Alarm time-piece! ಗಡಿಯಾರ ಕೆಟ್ಟರೆ 'ದುರಸ್ತಿ' (=ರಿಪೇರಿ) ಮಾಡಿಸಬೇಕಲ್ಲವೆ?

ಕೋಳಿಯ ಪ್ರಕೃತಿ-ಸ್ವಾಸ್ಥ್ಯಕ್ಕಾಗಿ ಚಿಂತಿಸುವ ನನ್ನನ್ನು ಹುಚ್ಚನೆನ ಬೇಡಿ; ಆ ವಿಚಾರದಿಂದ ನೀವು ರಾಜದ್ರೋಹದ ಅಪರಾಧಕ್ಕೆ ಕೂಡ ಗುರಿಯಾಗಬೇಕಾದೀತು. ಯಾಕೆಂದರೆ ಇಂದು ನಮ್ಮ ಸರಕಾರದವರು 'ಕೋಳಿಗಳನ್ನು ಆರೋಗ್ಯದಲ್ಲಿ ಸಾಕಬೇಕೆಂ"ಬ ನಿಯಮವನ್ನು ಹಾಕಿ, ಅದನ್ನು ಕಲಿಸಲು ಫಾರ್ಮ (Farm) ಗಳನ್ನು ಗೊತ್ತುಪಡಿಸಿದ್ದಾರೆ. ಕೋಳಿಗೆ ಇಂದು ಕಾಯಿದೆ ಪುಸ್ತಕದಲ್ಲಿ ಸ್ಥಾನದೊರಕುವುದಿದೆ; ಕೋಳಿಗೆ ಸರಕಾರದಿಂದ ಸ್ಕಾಲರಶಿಪ್ (=ಶಿಷ್ಯವೃತ್ತಿ) ದೊರೆತಿದೆ ತಿಪ್ಪೆ ಇದ್ದಲ್ಲಿ ಉಪ್ಪರಿಗೆಯಾಯಿತೆಂಬ ಗಾದೆಯ ಮಾತು ಯಥಾರ್ಥವಾಯಿತಲ್ಲವೆ?

'ಕೋಳಿಗೂ ಸರಕಾರಕ್ಕೂ ಯಾವ ಸಂಬಂಧ? ಇಲ್ಲವೆ ಕೋಳಿಯ ಮೇಲೆ ಇಷ್ಟೇಕೆ ಸರಕಾರದ ಪ್ರೇಮ?'—ಎಂದು ಯಾರಿಗಾದರೂ ಕುತೂಹಲವಾಗಬಹುದು ಕೋಳಿಯು ರಾಜಕಾರಣಪಟುವಿನಂತೆ ಸೂಕ್ಷ್ಮದರ್ಶಿಯಾಗಿದೆ ಎಂಬುದೆ ಉತ್ತರ; ಅಥವಾ ಕೋಳಿಯು ಸತ್ಯಶೋಧನೆಯಲ್ಲಿ ತೊಡಗಿದ ತತ್ತ್ವಜ್ಞಾನಿ ಎಂದೂ ಹೇಳಬಹುದು. ಅಸಹ್ಯ ವಿಕಾರವಿಚಾರ-ಗಳಿಂದಾವರಿಸಲ್ಪಟ್ಟ ಸಮಾಜದಲ್ಲಿ 'ಸತ್ಯವನ್ನು ಹುಡುಕುವ ತತ್ತ್ವಜ್ಞಾನಿಯಂತೆ' ಅಸಹ್ಯ ಕಸ-ಮುಸುರೆಗಳ ಗುಡ್ಡದಲ್ಲಿ ಸತ್ಯದ ಕಣವನ್ನು ಶೋಧಿಸುವುದು ಕೋಳಿ; ಅಥವಾ ಕೋಳಿ ಇದ್ದಲ್ಲಿ ಸ್ವಚ್ಛತೆ, ನಿಯತಕಾಲತ್ವ ಮೊದಲಾದ ಸತ್ಸಂಗತಿಗಳು ಕಂಡುಬರುವುದರಿಂದ—ಹೀಗೆ ಅನೇಕ ಕಾರಣಗಳಿಗಾಗಿ, ಕೋಳಿಗೆ ಸರಕಾರವು ಮಹತ್ತ್ವವನ್ನೇಕೆ ಕೊಟ್ಟಿರಬಾರದು?

ಆ ವಿಚಾರವಾದರೂ ಈಗೇಕ? ಸರಕಾರ ಹೇಳಿದೆ, ಕಾಯಿದೆ ಆಗಿದೆ' ಇನ್ನು ಮುಂದಿನ ವಿಚಾರವನ್ನು ಮಾಡೋಣ: ಕೋಳಿಗಳನ್ನು ಆರೋಗ್ಯದಲ್ಲಿ ಬೆಳಸಿದೆವೆಂದು ತಿಳಿಯೋಣ; ಮುಂದೆ? 'ಆರೋಗ್ಯ ಹೆಚ್ಚಿದಂತೆ ಕೋಳಿಗಳನ್ನು ಕೊಲ್ಲುವುದೂ ಹೆಚ್ಚುವುದು' ಎಂದು ಕಾಮ್ರೇಡ್—ಅಲ್ಲ—ಶ್ರೀಮಾನ್ ಜಮ್ನಾದಾಸ ಮೇಥಾರವರು ಹೇಳಿದರು. ಅವರ ವಿಚಾರಸರಣಿ ಏನೋ ಆಧುನಿಕ ರಾಜಕೀಯ ಪರಿಸ್ಥಿತಿಯನ್ನನುಲಕ್ಷಿಸಿ ಸಮಂಸಜವೆ ಇದೆ. ಉದಾಹರಣೆಗಾಗಿ ಯುದ್ಧದ ಸಿದ್ಧತೆಯನ್ನು ನಡೆಯಿಸಿದ ಇಂಗ್ಲಂಡ್, ಜರ್ಮನಿ, ಇಟಲಿಗಳನ್ನು ನೋಡಬಹುದು. ಯುವಕರ ಆರೋಗ್ಯಸುಧಾರಣೆಗಾಗಿ ಅಲ್ಲಿ ಒತ್ತಾಯದ ಉಪಾಯಗಳು ನಡೆದಿವೆ. ಯಾಕೆ? ನಾಳೆ

ಯುದ್ಧದಲ್ಲಿ ಸಾಯಲು ಸಾಕಷ್ಟು ಜನ ಬೇಕಲ್ಲವೆ? 'ಸಾಯುವುದೇ ಗುರಿಯಾಗಿದ್ದರೆ ಆರೋಗ್ಯ ಸುಧಾರಿಸುವ ದ್ರಾವಿಡೀಪ್ರಾಣಾಯಾಮ ಯಾಕೆ?' ಎಂದು ತಾವು ಕೇಳಬಹುದು. ಆರೋಗ್ಯ ಸರಿಯಾಗಿರದೆ ಮನೆಯಲ್ಲಿಯೇ ಸತ್ತರೆ? ಯುದ್ಧಕ್ಕೆ ಮುಂಚೆಯೆ ಸತ್ತರೆ? ಅದಕಾಗಿ ಯುದ್ಧದವರೆಗೆ ಎಲ್ಲರೂ ಜೀವದಿಂದಿರಬೇಕೆಂದು ಮುಂಚೆಯೆ ಆರೋಗ್ಯವನ್ನು ಸುಧಾರಿಸುವುದು. ಹಾಗೆಯೆ ಕೋಳಿಗಳ ಆರೋಗ್ಯಸುಧಾರಣೆ....ಎಂದು ಮೇಥಾರವರ ಆರೋಪ. ಆದರೆ ಆ ಆರೋಪದಲ್ಲಿ ತಥ್ಯಾಂಶವಿಲ್ಲ ಎಂದೇ ಹೇಳಬೇಕಾಗುವುದು. ಯಾಕೆಂದರೆ ನಮ್ಮದು ಕಾಂಗ್ರೆಸ್ ಸರಕಾರ; ಕಾಂಗ್ರೆಸು ಅಹಿಂಸಾಮಾರ್ಗಪ್ರವೃತ್ತವಾದ ಸಂಸ್ಥೆ. ಆದ್ದರಿಂದ 'ಕೊಲ್ಲುವ' ಎಂಬ ಶಬ್ದಕ್ಕೆ ಕೂಡ ಈ ಸಂದರ್ಭದಲ್ಲಿ ಅವಕಾಶವಿಲ್ಲ.

ಹಾಗಾದರೆ ಕೋಳಿಗಳ ಆರೋಗ್ಯಕ್ಕಾಗಿ ಇಷ್ಟೇಕೆ ಕಳವಳ? ಪ್ರಾಣಿದಯೆಯೆ ಕಾರಣವಾಗಿದ್ದರೆ, ಎಲ್ಲ ಪ್ರಾಣಿಗಳ ಆರೋಗ್ಯಸುಧಾರಣೆಗಾಗಿ ಕಾಯಿದೆ ಗೊತ್ತುಮಾಡಬೇಕಾಗಿತ್ತಲ್ಲವೆ? ಹಾಗೆ ಮಾಡಿಲ್ಲ. ಆದ್ದರಿಂದ ಕೋಳಿಗಳ ಸಂವರ್ಧನದಲ್ಲಿ ಆವುದೋ ಒಂದು ರಹಸ್ಯವಿದೆ, ರಾಜನೀತಿ ಇದೆ ಎಂದು ಸಿದ್ಧಾಂತ.

ರಹಸ್ಯವೊಂದಿದೆ. ಆ ರಹಸ್ಯ ಮಾರ್ಗದ ಭೇದವೂ ನನಗೆ ಹೊಳೆದಿದೆ– ಎಂಬ ಹೆಮ್ಮೆಯಿಂದಲೆ ನಾನೀಗ ಅದನ್ನು ಹೇಳಲುಜ್ಜುಗಿಸಿದ್ದೇನೆ ತುಸು ನೇರವಾಗಿ ನೋಡಿದಲ್ಲಿ ತಮಗೆ ಕೂಡ ಆ ರಹಸ್ಯ ತಿಳಿಯಬಹುದಾಗಿದೆ. ನಾನು ಮೇಲೆ ಹೇಳಿದ ಒಂದು ವಾಕ್ಯವು ಅದಕ್ಕೆ ಸಹಕಾರಿಯೂ ಆಗಬಹುದು. 'ಕಾಂಗ್ರೆಸು ಅಹಿಂಸಾಮಾರ್ಗಪ್ರವೃತ್ತವಾದ ಸಂಸ್ಥೆ' ಎಂದು ಹೇಳಿಲ್ಲವೆ? ಈ ವಾಕ್ಯವನ್ನೆ ಒಂದಿಷ್ಟು ವಿಂಗಡಿಸಿ ನೋಡಿದರಾಯಿತು, ಆ ರಹಸ್ಯ ಹೊರಬಿದ್ದಿತೆಂದೇ ತಿಳಿಯಬಹುದು. ಯಾಕೆಂದರೆ, ಅಹಿಂಸಾವೃತ್ತಿಗೆ ವಿಶ್ವಪ್ರೇಮವೆ ತಳಹದಿ. ಅರ್ಥಾತ್, ವಿಶ್ವಪ್ರೇಮದ ಪ್ರಚಾರಕ್ಕೂ ಕೋಳಿಯ ಸಂವರ್ಧನೆಗೂ ಸಂಬಂಧವಿದೆ ಎಂದಂತಾಯಿತು.

ಮಕ್ಕಳಿಂದ ಮನಸ್ಸು ದೊಡ್ಡದಾಗುವುದಂತೆ. ಆದರೆ ಮಕ್ಕಳೇ ಇಲ್ಲದ ದುರ್ದೈವಿಗಳ ಗತಿ ಏನು? ಅವರ ಮನಸ್ಸು ದೊಡ್ಡದಾಗುವುದು ಹೇಗೆ?

ಇಂಗ್ಲಂಡಿನಲ್ಲಿ ನಾಯಿಯನ್ನೊ ಬೆಕ್ಕನ್ನೊ ಮಗುವಿನಂತೆ ಸಾಕುವರಂತೆ.... ಮಕ್ಕಳಿಲ್ಲದೆ ಮರುಗುವ ಮಡದಿಯರು. ಇಂಗ್ಲಿಶರು ಮ್ಲೇಂಚ್ಛರಿದ್ದುದರಿಂದ



ಮುಖ್ಯಮಂತ್ರಿ :— ಭಲೆ, ನೀವು ಕೋಳಿಗಳನ್ನು ತುಂಬ ಚೆನ್ನಾಗಿ ಸಾಕಿದ್ದೀರಿ! ಸಾಕಷ್ಟು ಪುಷ್ಟವಾಗಿವೆ. ಏನೂ ಅಡ್ಡಿಯಿಲ್ಲ. ಯುರೋಪಿನಲ್ಲಿ ಎಲ್ಲ ರಾಷ್ಟ್ರಗಳೂ ಸೈನ್ಯ ಬೆಳೆಯಿಸುತ್ತಲಿವೆ; ನಾವು ಅವರಿಗೆ ಕೋಳಿಗಳನ್ನು ಬೆಳೆಯಿಸಿಕೊಟ್ಟು ದುಡ್ಡನ್ನು ಗಳಿಸೋಣ! ಇನ್ನೇನು ಹಿಂದುಸ್ಥಾನಕ್ಕೆ ಬಡತನದ ಭೀತಿಯಿಲ್ಲ. ಪಾಶ್ಚಾತ್ಯರು ನಮ್ಮಿಂದ ಸೆಳೆದುಕೊಂಡೊಯ್ದ ಸಂಪತ್ತಿಯನ್ನೆಲ್ಲ ಮರಳಿಪಡೆಯೋಣ!

ಜನರು :— ಹುಯ್ ಹಾ! ಜಯ್ ಕೋಳೀಮಾತಾಕೀ ಜಯ್! ವಂದೇ ಹುಂಜರಾಜಂ!

ನಾಯಿಯನ್ನು ಮುಟ್ಟುವರು ಅವರು; ಆದರೆ ಭಾರತದ ಮಡಿವಂತ ಮಾನಿನಿಯರ ಗತಿ ಏನು? ನಮ್ಮವರು ಬೆಕ್ಕನ್ನು ಸಾಕಬಹುದಾಗಿತ್ತು. ಆದರೆ ವರ್ಷಕ್ಕೊಮ್ಮೆ ಪ್ಲೇಗನ್ನು ತರುವ ಇಲಿಗಳ ಸಂಖ್ಯೆ ದೊಡ್ಡದಿದ್ದುದರಿಂದ, ನಮ್ಮ ದೇಶದ ಬೆಕ್ಕುಗಳಿಗೆ 'ಸಾಕಿಸಿಕೊಳ್ಳಲು' ಬಿಡುವಿಲ್ಲ ಎನಬಹುದು. ನಾಯಿಯನ್ನು ಮುಟ್ಟುವಂತಿಲ್ಲ, ಬೆಕ್ಕಿಗೆ ಬಿಡುವಿಲ್ಲ. ಆದರೂ ಈ ಬಂಜೆಯರ

ಮನಸ್ಸನ್ನು ದೊಡ್ಡದಾಗಿಸಬೇಕಲ್ಲವೆ? ಇದಕ್ಕೆ ಯಾವ ಉಪಾಯ?– ಎಂಬ ಅನನ್ಯಗತಿಯ ಪ್ರಸಂಗದಲ್ಲಿ, ಕೋಳಿಯ ತೊಡಕನ್ನು ಬಿಡಿಸುವುದೆಂದು ನಮ್ಮ ಸರಕಾರದ ಅಭಿಪ್ರಾಯವಿದ್ದಂತೆ ತೋರುವುದು. ಫಾರ್ಮು ಗಳಲ್ಲಿ ಸ್ವಚ್ಛವಾಗಿ, ಆರೋಗ್ಯಕರವಾಗಿ ಬೆಳಸಿದ ಕೋಳಿಯನ್ನು ಸಾಕಿದರೆ, ಬಂಜೆಗೆ ಮಗುವಿನ ಪ್ರೇಮ ಕೊನರಿ, ಅವಳ ಮನಸ್ಸು ದೊಡ್ಡದಾಗ ಬಹುದಲ್ಲವೆ? ಇದಲ್ಲದೆ ಮನೆಯಲ್ಲಾದರೂ ಆ ಕೋಳಿಯ ಉಪಯುಕ್ತತೆ. ಎಂತಹದು! ಬೆಳಗಿನ ಜಾವದಲ್ಲಿ ಕೋಮಲವಾಗಿ ಕೂಗಿ, ಮನೆಯ ಯಜ ಮಾನತಿಯನ್ನು ಮನೆಗೆಲಸಕ್ಕೆ ಜಾಗ್ರತೆಯಾಗಿ ಎಚ್ಚರಗೊಳಿಸುವುದು. ಮುಂದೆ ಕಾಳಃ–ಅಕ್ಕಿಗಳ ಹರಳುಗಳನ್ನು ಹಸನು ಮಾಡುವುದು. ಮೊಟ್ಟೆ (=ತತ್ತಿ)ಗಳನ್ನಿಟ್ಟು ಮೊಮ್ಮಕ್ಕಳ ಸುಖಾನುಭವಗಳನ್ನು ನೀಡುವುದು. ಮನೆತುಂಬ ಕು-ಕು–ಕು–ಕುಣಿದಾಟವೆ ಕು-ಕೂ–ಕು ಕುಣಿದಾಟ!

ಪ್ರೇಮದ ಪ್ರಚಾರದಲ್ಲಿ ಕೋಳಿ ಇನ್ನೊಂದು ವಿಧವಾಗಿ ಸಹಾಯಕಾರಿ ಯಾಗುವುದೆಂದು ನನ್ನ ಅಭಿಪ್ರಾಯಃ. ಇದು ವಿಶ್ವಪ್ರೇಮದ ಮಾತಲ್ಲ, ಯುವ–ಯುವತಿಯರ ಪ್ರೇಮದ ಮಾತು. ಪುರಾಣಕಾಲದಲ್ಲಿ ನಳ–ದಮ ಯಂತಿಯರಿಗೆ ಹಂಸಿಯೆ ದೂತಿಯಾಗಿತ್ತಂತೆ; ಆ ಮಾತು ನಿಜವಿದ್ದರೆ, ಕಲಿಯುಗದ ಈ ಕಾಲದಲ್ಲಿ ಕೋಳಿಯೆ ಪ್ರಣಯಿಗಳಿಗೆ ದೂತನಂತೆ ಯಾಕಾಗ ಬಾರದು? ತಂತಿ (telegram) ಯ 'ಕ-ಡ-ಕ-ಟ್' ಗಳಲ್ಲಿ ಒಂದು ಸಂಕೇತವಿದೆಯಂತೆ– 'ಕಡ' ಎಂದರೆ ಇಂತಹ ಅಕ್ಷರ 'ಕಟ್' ಎಂದರೆ ಇಂತಹ ಅಕ್ಷರ; ಹೀಗೆ ಏನೇನೊ ಜೋಡಣೆ ಇದೆಯಂತೆ. ಹಾಗೆಯೆ 'ಕುಕು ಕೂಕೂ' ಎಂಬುದೂ ಸಾಂಕೇತಿಕ ಭಾಷೆಯಾಗಬಹುದಲ್ಲವೆ? 'ಕು ಕೂ = ಪ್ರಾಣನಾಥಾ;–ಕುಕೂಕೂ = ನಿನ್ನಲ್ಲಿ; ಕೂಕು = ಪ್ರೇಮವಿದೆ' ಎಂದರೆ ಹೀಗೆಯೆ ಯಾವುದಾದರೊಂದು ಸಂಕೇತವನ್ನಿಟ್ಟುಕೊಳ್ಳಬಹುದು. ಈ ಪ್ರಕಾರ ಪ್ರಣಯ ದೂತನಾಗಬೇಕಾದರೆ ಕೋಳಿಗೆ ಚೆನ್ನಾದ ಆರೋಗ್ಯ ಅವಶ್ಯವಲ್ಲವೆ? ಪ್ರಣಯಸಂದೇಶಗಳನ್ನು ಮುಟ್ಟಿಸುವಾಗ ಎಂತಹ ದುರ್ಧರ ಪ್ರಸಂಗಗಳು ಬಂದರೂ ಅವನ್ನು ದಾಟುವ ಎದೆಗಾರಿಕೆ, ವೈಗಸುವು ಬೇಕಲ್ಲವೆ? ಇಲ್ಲವಾದರೆ, ನಿಮ್ಮ ದೂತಗೋಳಿ ನಿಮ್ಮ ಪ್ರಣಯಿನಿಯ ಮನೆಗೆ ಹೋಯಿತೆಂದು ತಿಳಿಯೋಣ; ಆಗ ಹೊರಗೆ ಆಕೆಯ ಹಿರಿಯರು

ಎಲೆಯಡಿಕೆ ತಾಂಬೂಲವನ್ನು ಕುಟ್ಟುತ್ತ ಕುಳಿತಿದ್ದಾರೆಂದು ತಿಳಿಯೋಣ; ಆ ಸಂದರ್ಭದಲ್ಲಿ ನಿಮ್ಮ ದೂತಗೋಳಿಯು 'ಕುಕೂ'ಗೆ ಕೋಪಿಸಿ ಕೈಯಲ್ಲಿಯ 'ಖಲಬತ್ತ'ನ್ನು ಒಗೆದರೆ? ಇಲ್ಲವೆ-ಒಂದೇಸವನೆ ಸುರಿಯುವ ಮಳೆಯಲ್ಲಿ ನಡೆದುಹೋಗಿ 'ಕುಕೂ' ಎನಬೇಕೆಂದರೆ ಚಳಿಯಾಗಿ ಧ್ವನಿಯೆ ಇಲ್ಲದಂತಾದರೆ? ಇಂತಹ ಯಾವ ಸಂದೇಹಸಂದರ್ಭಗಳೂ ಬೇಡವಾಗಿದ್ದರೆ, ಕೋಳಿಯ ಆರೋಗ್ಯವು ಉತ್ತಮವಾಗಿರಬೇಕು. ಆರೋಗ್ಯದ ಕೋಳಿಯ ಕಂಠದಿಂದ ತನ್ನ 'ಕನ್ಹಯ್ಯನ'ನ ಸಂದೇಶವನ್ನು ಕೇಳುವ ಕಾಮಿನಿಗೆ ಎಷ್ಟೊಂದು ಕುಕೂ ಆದರೂ ಇನ್ನೂ ಬೇಕು ಎನಿಸುವುದು.

'ಕಾಂಗ್ರೆಸಿನಲ್ಲಿ ಇಂತಹ ಪ್ರೇಮಕ್ಕೆ ಸ್ಥಾನವಿಲ್ಲ, ಇದೆಲ್ಲ ನಿಮ್ಮದೇ ಕುತ್ಸಿತ ವಿಚಾರ' ಎಂದು ಕೆಲವು ವಾಚಕರಾದರೂ ನಮಗೆ ನೀತಿಪಾಠವನ್ನು ಹೇಳಬಹುದು. ಆದರೆ 'ಯುವ-ಯುವತಿಯರ ಪ್ರೇಮವೆ ವಿಶ್ವಪ್ರೇಮದ ತಳಹದಿ' ಎಂಬುದನ್ನು ವಾಚಕರು ಮರೆಯದಿರಲಿ. ಕಾಂಗ್ರೆಸ್ ಎಂಬುದು ಕೇವಲ ನಾಲ್ಕನೆಯ ಆಶ್ರಮವಲ್ಲ, ನಿಸರ್ಗಸಿದ್ಧ ಅಧಿಕಾರಗಳಿಗಾಗಿ ಪಡುವ ಶ್ರಮ. ನಾಳೆ ಮದುವೆಯಾಗದವನು ಇಲ್ಲವೆ ಹೆಂಡತಿಯನ್ನು ಬಿಟ್ಟವನೆ ಕಾಂಗ್ರೆಸ್ ಸದಸ್ಯನಾಗಬಲ್ಲನು....ಎಂಬ ನಿಯಮ ಬಂದಾಗ ನೋಡೋಣ; ಅಲ್ಲಿಯವರೆಗೆ ದೂತಗೋಳಿಯ ಆರೋಗ್ಯವನ್ನು ಸುಧಾರಿಸೋಣ

ಕಾಂಗ್ರೆಸು ದೇಶಾಭಿಮಾನದ ಸಂಸ್ಥೆಯಾಗಿದೆ. ದಾಸ್ಯಮೋಹದಲ್ಲಿ ನಿದ್ದೆಹೋದ ಭಾರತೀಯರನ್ನು ಎಚ್ಚರುಗೊಳಿಸುವ ಕಾರ್ಯವು ಕಾಂಗ್ರೆಸಿನ ಕಾರ್ಯಕ್ರಮದಲ್ಲಿ ಮಹತ್ತ್ವದ ಮಾತಾಗಿದೆ. ಆದ್ದರಿಂದ ನಿದ್ದೆಹೋದ ಜಗತ್ತನ್ನೆ ಎಚ್ಚರುಗೊಳಿಸುವ ಕೋಳಿಯು ಕಾಂಗ್ರೆಸಿನ ಸಂಕೇತವಾದರೆ, ನಿಶಾನೆ ಎನಿಸಿದರೆ, ಆರಾಧ್ಯದೇವತೆಯಂತಿದ್ದರೆ ಆಶ್ಚರ್ಯವೇನು?

ಇದಲ್ಲದೆ ರಾಜಕೀಯ ಆಡಳಿತದ ದೃಷ್ಟಿಯಿಂದ ಕೂಡ ಕಾಂಗ್ರೆಸಿಗೆ ಕೋಳಿಯ ಮಹತ್ತ್ವವಿದೆ. ಇಂದು ವೆಚ್ಚದ ಉಳಿತಾಯಕ್ಕಾಗಿ ಎಷ್ಟೋ ಮ್ಯುನಿಸಿಪಾಲಿಟಿಗಳು ಚೀಫ್ ಆಫೀಸರು ಇಲ್ಲದೆ ಕೆಲಸ ನಡೆಸಿವೆ, ಇನ್ನು ಎಷ್ಟೋ ಮ್ಯುನಿಸಿಪಾಲಿಟಿಗಳು ರದ್ದಾಗುತ್ತಲಿವೆ. ಇಂತಹ ಪ್ರಸಂಗಗಳಲ್ಲಿ ಕೋಳಿಯಲ್ಲದೆ ನಗರದ ಕಸ-ಮುಸುರೆಯನ್ನು ಹಸನುಮಾಡಿಸುವರಾರು?

ಹೀಗೆ ಹಸನುಮಾಡಿಸುವಾಗ ಕೆಲಸ ಕಳೆದುಕೊಂಡದ್ದಕ್ಕಾಗಿ ಕನಲಿದ ನಗರ ಪಾಲಕರು ಕೋಳಿಯ ಮೇಲೆ ಕೈ ಎತ್ತಬಹುದಲ್ಲವೆ? ಆಗ ಕೋಳಿಯು ಆರೋಗ್ಯ ಸರಿಯಾಗಿದ್ದರೆಯೆ ಒಳಿತಲ್ಲವೆ?

ಹೀಗೆ ತಾತ್ತ್ವಿಕ–ನೈತಿಕ–ಸಾಮಾಜಿಕ-ರಾಜಕೀಯ ಕಾರಣಗಳಿಗಾಗಿ ಕೋಳಿಗೆ ಕಾಂಗ್ರೆಸ್ ಸಂಸ್ಥೆಯಲ್ಲಿ ಆತಏವ ಕಾಂಗ್ರೆಸ್ ಮಂತ್ರಿಮಂಡಳಗಳ ದೃಷ್ಟಿಯಿಂದ ಮೇಲಿನ ಸ್ಥಾನವಿದೆ.

ಈ ರಹಸ್ಯವನ್ನರಿಯದ ಕಾಮ್ರೇಡ್ ಝಾಬವಾಲಾ ಅವರು 'ಕೋಳಿಗಳನ್ನು ಕೊಲ್ಲುವುದು ಮಹಾ ಪಾಪಕರ' ಎಂದರು. ಆದರೆ ಇದು ಪಾಪಕರ ಅಲ್ಲ, ಮನುಷ್ಯರ ಕರ; ಆ ಕರದಲ್ಲಿಯ ಹಣದಿಂದ ಕೋಳಿಗಳ ಆರೋಗ್ಯವನ್ನು ಸುಧಾರಿಸುತ್ತಲಿದ್ದೇವೆ. ನಮ್ಮ ಹಣದಿಂದ ಇನ್ನೊಬ್ಬರ ಹಿತವೇಕೆ—ಎಂದು ಕಾಮ್ರೇಡರ ಕೂಗು.

ಆದರೆ ಆ ಕೂಗನ್ನು ಕೇಳುವವರಾರು? ಇಂದು ಕೇಳಬೇಕಾದ ಕೂಗು ಒಂದೇ—ಕುಕೂಕು!

ಎಪ್ರಿಲ್ '೩೯

---

# ಜೀವನ ಸಂಗ್ರಾಮ

ಪುರಾತನಕಾಲದ ಸಹಸ್ರಾವಧಿ ವರ್ಷಗಳ ಪ್ರಾರಬ್ಧ—ಅಲ್ಲಲ್ಲ—ಪ್ರಾರಭ್ಯ—ಅಥವಾ, ಕನ್ನಡದಲ್ಲಿಯೆ ಬರೆಯೋಣ; ಯಾಕೆಂದರೆ, ಈಗ ನಾನು ಬರೆಯುವದು 'ಗ್ರಾಮಸಂಜೀವನ ಎಂದರೆ ಹಳ್ಳಿಗಳ ಹೊಸ ಜೀವನ' ಎಂಬ ವಿಷಯವಾಗಿ. ಎಂದ ಮೇಲೆ ಹಳ್ಳಿಗರಿಗೂ ತಿಳಿಯುವಂತಹ ಭಾಷೆಯಲ್ಲಿಯೆ ಬರೆಯಬೇಕಲ್ಲವೆ? 'ಪ್ರಥಮಗ್ರಾಸೇ ಮಕ್ಷಿಕಾಪಾತಃ' ಎಂಬಂತೆ ಇಲ್ಲಿಂದಲೆ ನಮ್ಮ ಪ್ರಶ್ನೆಯ ತೊಡಕಿಗೆ ಪ್ರಾರಂಭವಾಯಿತು. ಹಳ್ಳಿಗರ ಭಾಷೆ ಬೇರೆ, ನಾಗರಿಕರ ಭಾಷೆ ಬೇರೆ! ಹಳ್ಳಿಗಳಲ್ಲಿ ಹೊಸತನವನ್ನು ತರುವ

ಮುಂಚಿತ, ಅಥವಾ ಹೊಸತನದ ಮೊದಲ ಹೆಜ್ಜೆ ಎಂದು ಹಳ್ಳಿಗರ ಭಾಷೆ-ಯನ್ನು ಸುಧಾರಿಸಬಾರದೇಕೆ? ಇಲ್ಲವಾದರೆ ನಾವು—ಎಂದರೆ ನಾಗರಿಕರು—ಬರೆದದ್ದೆಲ್ಲ ಮ್ಯುನಸಿಪಾಲಿಟಿಯ ಮೇಲೆ ಮಳೆಗರೆದಂತಾದೀತು. ಹಿಂದು-ಸ್ತಾನವು ಹಳ್ಳಿಗಳಿಂದ ತುಂಬಿದ ದೇಶ, ಆದ್ದರಿಂದ ನಾಗರಿಕರಿಗಿಂತ ಹಳ್ಳಿಗರ ಸಂಖ್ಯೆ ಬಹಳೇ ದೊಡ್ಡದು; ಅದಕಾಗಿ ನಾಗರಿಕರೇ ಹಳ್ಳಿಗರ ಭಾಷೆಯನ್ನು ಕಲಿಯುವುದು ಸುಲಭ ಮತ್ತು ಶೀವ್ರಸಾಧ್ಯವಾದುದು....ಎಂಬುದೊಂದು ಪಕ್ಷವು ಉಪಸ್ಥಿತವಾಗುವುದು. ಇದಲ್ಲವೆ ತೊಡಕು?

ಭಾಷೆಯ ವಿಷಯ ಕೆಲಹೊತ್ತು ಬದಿಗಿಟ್ಟು, ಗ್ರಾಮಪುನರುದ್ಧಾರದ ವಿಷಯವಾಗಿ ವಿಚಾರ ಮಾಡೋಣ. ಪುನರುದ್ಧಾರವು ಅವಶ್ಯವೆಂದು ಎಲ್ಲರೂ ಅಭಿಪ್ರಾಯಪಡುವುದರಿಂದ, ಸದ್ಯಕ್ಕೆ ಹಳ್ಳಿಗಳ ಸ್ಥಿತಿ ಕೆಟ್ಟಿದೆ ಎಂದಂತಾಯಿತು. ಅದಕ್ಕಾಗಿ ಯಾವ ಯಾವ ವಿಷಯಗಳಲ್ಲಿ ಕೆಟ್ಟಿದೆ ಎಂಬುಡನ್ನು ನೋಡೋಣ, ಎಂದರೆ ಯಾವ ಯಾವ ರೀತಿಗಳಲ್ಲಿ ಪುನರುದ್ಧಾರ ಮಾಡಬೇಕಾಗುವುದೆಂಬುದು ತಾನಾಗಿಯೆ ಹೊಳೆಯುವುದು.

ಮೊದಲಮಾತೆಂದರೆ ಹಳ್ಳಿಗರಿಗೆ ಉತ್ತಮಜೀವನಕ್ಕೆ ಅವಶ್ಯವಿದ್ದ ಆರೋಗ್ಯಜ್ಞಾನವಿಲ್ಲ. ಅದಕಾಗಿ ಪ್ರತಿಯೊಬ್ಬ ಹಳ್ಳಿಗನು ಇಂದು ವೈಯ-ಕ್ತಿಕವಾಗಿ ತನ್ನ ಹಳ್ಳಿಯ ಹೊಲಸಿಗೆ ಹೊಣೆಗಾರನಾಗಿದ್ದಾನೆ. ಈ ಅಜ್ಞಾನ ವನ್ನು ಹೋಗಲಾಡಿಸಬೇಕು. ಈ ಹೊಣೆಗಾರಿಕೆಯನ್ನು ತಪ್ಪಿಸಬೇಕು. ಅದಕಾಗಿ ನಗರಗಳ ಮಾದರಿಯನ್ನು ಅವನ ಮುಂದಿಡಬೇಕು. ನಗರದ ಸ್ಥಿತಿಯನ್ನು ಬಲ್ಲಿರಾ? ಪ್ರತಿಯೊಬ್ಬ ನಾಗರಿಕನಿಗೆ ಆರೋಗ್ಯಜ್ಞಾನದ ಮೂಲ ಸಂಗತಿಗಳು ಗೊತ್ತಿವೆ. ಅದಕಾಗಿ ಯಾವ ನಾಗರಿಕನೂ ತನ್ನ ನಗರದ ಹೊಲಸಿಗಾಗಿ ಹೊಣೆಗಾರನಾಗುವುದಿಲ್ಲ. ಇಷ್ಟೇಕೆ? ತನ್ನ ಸುತ್ತಲು ಹೊಲಸನ್ನು ಹರಡುವ ತನ್ನ ಅಧಿಕಾರವನ್ನೆ ಅವನು ಬಿಟ್ಟು ಕೊಟ್ಟಿದ್ದಾನೆ. ಇಂತಹ ಸಂದರ್ಭದಲ್ಲಿ ಒಮ್ಮೆ ಹೊಲಸಿನ ಅವಶ್ಯಕತೆ ಎನಿಸಿತೆಂದು ತಿಳಿಯೋಣ. ಆಗ ಸಾಂಘಿಕವಾಗಿ ಮ್ಯುನಿಸಿಪಾಲಿಟಿ ಎಂಬ ಸಂಸ್ಥೆಯನ್ನು ಸಿದ್ಧಪಡಿಸುತ್ತಾನೆ. ಹಳ್ಳಿಗನಿಗೂ ನಾಗರಿಕನಿಗೂ ಇರುವ ಮುಖ್ಯ ವ್ಯತ್ಯಾಸವೆಂದರೆ ಇದು. ಹಳ್ಳಿಗನಿಗೆ ತನ್ನ ಅಜ್ಞಾನವನ್ನಾಗಲಿ ದುರ್ಗುಣವನ್ನಾಗಲಿ ತಪ್ಪಿಸಿಕೊಳ್ಳುವ ಶಕ್ತಿಯಾಗಲಿ ಉಪಾಯವಾಗಲಿ

ಇಲ್ಲವೇ ಇಲ್ಲ; ಆದರೆ ನಾಗರಿಕನು ಮಾತ್ರ ಇಂತಹ ಎಲ್ಲ ಸಂದರ್ಭಗಳಿಗೆ ರಾಮಬಾಣದಂತೆ ಮ್ಯುನಿಸಿಪಾಲಿಟಿ ಎಂಬ ಶಸ್ತ್ರವನ್ನಿಟ್ಟುಕೊಂಡಿದ್ದಾನೆ; ಪ್ರತಿಯೊಂದು ವ್ಯಕ್ತಿಯ ಪಾಪಶಕ್ತಿಯನ್ನು ಹೊಡೆದೋಡಿಸುವುದೂ ಸುಲಭವಾಗುವುದು. ಮ್ಯುನಿಸಿಪಾಲಿಟಿಯು ರೂಪದಿಂದ ಅವೆಲ್ಲ ಒಂದೆಡೆ ಸೇರಿದ್ದರಿಂದ ಅದೊಂದನ್ನು ಹೊಡೆದರೆ ಸಾಕು; ಇಡಿಯ ನಗರದ ಕಿಡಿಗೇಡಿತನವನ್ನು ಹೊಡೆದೋಡಿಸಿದಂತಾಗುವುದು. ತಾತ್ಪರ್ಯವೇನೆಂದರೆ, ಹಳ್ಳಿಗರ ಪುನರುದ್ಧಾರವೆಂದರೆ ಪ್ರತಿಯೊಂದು ಹಳ್ಳಿಗೆ ಒಂದು ಮ್ಯುನಿಸಿಪಾಲಿಟಿ ಬೇಕು.

ಇನ್ನೊಂದು ಮಾತು: ಎಂದಿನಿಂದಲೂ ನಮ್ಮ ಹಳ್ಳಿಗಳು ಹೆಸರಾದುದು— ಅವುಗಳಲ್ಲಿ ಕಾಡುಬರುವ ಪ್ರಾಮಾಣಿಕತನಕ್ಕಾಗಿ. ಆದರೇನು? ಹಾಯ್! ಹಾಯ್! ಇಂದು ಎಲ್ಲಿದೆ ಆ ಪ್ರಾಮಾಣಿಕತನ! ಪಾಪ! ಬಡ ಹಳ್ಳಿಗನಿಗೆ ತನ್ನ ಪ್ರಾಮಾಣಿಕತನವನ್ನು ತೋರಿಸಬೇಕಾದರೆ ಸಮೀಪದ-ಅವಶ್ಯಬಿದ್ದರೆ ದೂರದ-ನಗರಕ್ಕೇ ಹೋಗಬೇಕಾಗುವುದು. ಹಳ್ಳಿಗನಾದರೂ ಮಾಡುವನೇನು? ತನ್ನ ಹುಟ್ಟುಗುಣವಾದ, ತನ್ನಲ್ಲಿ ಹೊಟ್ಟೆತುಂಬಿ ಹೊರಸೂಸಬಹುದಾದ ಪ್ರಾಮಾಣಿಕತನವನ್ನು ತೋರಿಸದೆ ಅವನಿಗೆ ಗತ್ಯಂತರವಿಲ್ಲ. ಅದಕ್ಕಾಗಿ ಮೇಲಿಂದ ಮೇಲೆ ನಗರಕ್ಕೆ ಹೋಗದೆ ನಡೆಯುವಂತಿಲ್ಲ. ಹಳ್ಳಿಯ ಪುನರುದ್ಧಾರವನ್ನು ಕೈಕೊಳ್ಳುವುದಾದರೆ ನಾವು ಹಳ್ಳಿಗನಿಗೆ ಹಳ್ಳಿಯಲ್ಲಿಯೆ ತನ್ನ ಪ್ರಾಮಾಣಿಕತನವನ್ನು ತೋರಿಸಲು ಅವಕಾಶ ಮಾಡಿಕೊಡಬೇಕು, ಅರ್ಥಾತ್ ಪ್ರತಿಯೊಂದು ಹಳ್ಳಿಯಲ್ಲಿ ಕೋರ್ಟು ಕಚೇರಿಗಳನ್ನು ಸ್ಥಾಪಿಸಬೇಕು. ಹಾಗೆ ಮಾಡಿದರೆ ಮೇಲಿಂದಮೇಲೆ ನಗರಕ್ಕೆ ನಡೆದು ಅಲ್ಲಿಯ ಕೋರ್ಟು-ಕಚೇರಿಗಳಲ್ಲಿ ವ್ಯಾಜ್ಯವನ್ನೂ ಸಾಕ್ಷ್ಯವನ್ನೂ ನಡೆಯಿಸುವ ತೊಂದರೆ ತಪ್ಪಿ, ಇದ್ದಲ್ಲಿಯೆ ದಿನಾಲು ಆಣೆಯ ನಿಮಿತ್ತದಿಂದಾದರೂ ದೇವರ ನಾಮವನ್ನು ಸ್ಮರಿಸಿ, ತನ್ನ ಜೀವನದ ಪ್ರಾಮಾಣಿಕತನವನ್ನು (ಅಥವಾ ಪ್ರಾಮಾಣಿಕತನದ ಜೀವನವನ್ನು ಎನ್ನಿರಿ) ಬಯಲಿಗಿಡಬಹುದು.

ಮೇಲಿನಂತೆ ವ್ಯವಸ್ಥೆಯನ್ನು ಮಾಡಿದರೆ ಹಳ್ಳಿಗಳ ಪುನರುದ್ಧಾರ ಕಾರ್ಯದಲ್ಲಿ ಇನ್ನೊಂದು ಲಾಭದ ಸಂಗತಿ ತಾನಾಗಿಯೆ ಜರುಗುವುದೆಂಬುದು

ತಮಗೆ ಹೊಳೆದಿರಬಹುದಲ್ಲವೆ? ಸದ್ಯಕ್ಕೆ ನಮ್ಮ ಹಳ್ಳಿಗಳೆಲ್ಲ ಬಯಲಾ-ಗುತ್ತಿವೆ. ಅನೇಕ ಮನೆತನಗಳಲ್ಲಿ ಮಕ್ಕಳು ಇಂದಿನ ನಾಗರಿಕ 'ಶಿಕ್ಷಣ' ವನ್ನು ಪಡೆದು, ಆ ಮೇಲೆ, ಹಳ್ಳಿಯ ಜೀವನಕ್ಕೆ ಬೇಸತ್ತು ನಗರಗಳಲ್ಲಿಯೆ ಉಳಿದುಕೊಳ್ಳುವರು. ಒಂದು ವೇಳೆ ಕೋರ್ಟು ಕಚೇರಿಗಳನ್ನೆ ಪ್ರತಿ-ಯೊಂದು ಹಳ್ಳಿಯಲ್ಲಿ ಸ್ಥಾಪಿಸಿದರೆ ಈ 'ಸುಶಿಕ್ಷಿತ'ರೆಲ್ಲ ತಂತಮ್ಮ ಹಳ್ಳಿಗಳಿಗೆ ತಿರುಗಬಹುದಲ್ಲವೆ? ಸದ್ಯಕ್ಕೆ ಇವರಿಗೆ ಹಳ್ಳಿಯ ಜೀವನವು ಬೇಜಾರಾಗಲು ಮುಖ್ಯಕಾರಣವೆಂದರೆ ಹಳ್ಳಿಯಲ್ಲಿ ಹೊತ್ತು ಗಳೆಯುವ ಸಾಧನಗಳಿಲ್ಲ. ವಿಶೇಷವಾಗಿ ವೃತ್ತಪತ್ರಗಳನ್ನು ಓದಲು, ಉದ್ದರಿ ಉಪಾಹಾರ ಮಾಡಲು, ಮಧ್ಯಾಹ್ನದ ಬಿಸಿಲಿನಲ್ಲಿ ಶಾಂತವಾಗಿ ನಿದ್ದೆಮಾಡಲು ಕೋರ್ಟು-ಕಚೇರಿ ಗಳು ನಗರಗಳಲ್ಲಿ ಅತ್ಯಂತ ಅನುಕೂಲವಾದ ಸ್ಥಳಗಳಾಗಿರುತ್ತವೆ. ಅವನ್ನು ಹಳ್ಳಿಗಳಿಗೆ ಸ್ಥಳಾಂತರಿಸಿದರೆ ಸಾಕು, ನಮ್ಮ ತರುಣ ಸುಶಿಕ್ಷಿತರೂ ಅವು ಗಳೊಡನೆಯೆ ಸ್ಥಳಾಂತರಿಸುವರು. ಹೀಗಾಗಿ ಹಳ್ಳಿಗಳಲ್ಲಿ ಮತ್ತೆ ಚೈತನ್ಯದ ಕಲಕಲ ಪ್ರಾರಂಭವಾಗುವುದು; ಹಳ್ಳಿಗಳ ಜನಸಂಖ್ಯೆಯೂ ಹೆಚ್ಚುವುದು.

ಕ್ಷಮಿಸಬೇಕು; ಆಧುನಿಕರಾದ, ಸುಶಿಕ್ಷಿತರಾದ ನನ್ನ ತರುಣ ಬಂಧುಗಳೆ, ಕ್ಷಮಿಸಿರಿ ನನ್ನನ್ನು. ತಮ್ಮ ಅವಹೇಳನೆಗಾಗಿ ನಾನು ಈ ಮಾತನ್ನು ಹೇಳುವುದಿಲ್ಲ. ನಮ್ಮ, ನಿಮ್ಮ— ಅದೇಕೆ?– ನಮ್ಮೆಲ್ಲರ ತಾಯ್ನಾಡಾದ ಭರತಭೂಮಿಯ ಭಾವೀ ವೈಭವದ ದೃಷ್ಟಿಯಿಂದ ನಾನೀ ಮಾತನ್ನು ಹೇಳುತ್ತಿರುವೆ. ಹಿಂದೊಮ್ಮೆ ನಮ್ಮ ನಾಡು ಸುವರ್ಣಭೂಮಿ-ಯಾಗಿತ್ತು. ಯಾಕೆ? ಆಗಿನ ನಮ್ಮ ಹಳ್ಳಿಗಳಲ್ಲಿ ಚೈತನ್ಯವಿತ್ತೆಂದು. ಇಂದು ನಮ್ಮ ನಾಡು ಬಡತನದ ಬಯಲುಭೂಮಿಯಾಗಿದೆ. ಯಾಕೆ? ನಮ್ಮ ಹಳ್ಳಿಗಳ ಜೀವನದಲ್ಲಿ ಚೈತನ್ಯವಿಲ್ಲವೆಂದು. ಅರ್ಥಾತ್, ಇನ್ನು ಮುಂದೆ ನಮ್ಮ ನಾಡು ಮತ್ತೊಮ್ಮೆ ಸುವರ್ಣಭೂಮಿಯಾಗಬೇಕಾದರೆ ಹಳ್ಳಿಗಳಲ್ಲಿ ಚೈತನ್ಯ ತುಂಬಬೇಕಲ್ಲವೆ, ಎಂದರೆ ನಗರಗಳನ್ನು ತಗ್ಗು ತೋಡಿ ತುಂಬ ಬೇಕಲ್ಲವೆ, ಎಂದರೆ........

ಕ್ಷಮೆ ಇರಲಿ. ಏನನ್ನೊ ಬರೆಯಲಿ ಹೋಗಿ ಮತ್ತೇನನ್ನೊ ಬರೆಯು ತೊಡಗಿದೆ ಈ ಲೆಕ್ಕಣಿಕೆ. ನೋಡಿದಿರಾ ನಾಗರಿಕ ಸಂಸ್ಕೃತಿಯ ಕಿಡಿಗೇಡಿ

ತನವನ್ನು! ಈ ಹಾಳು ನಾಗರಿಕ ಸಂಸ್ಕೃತಿಯು ಕತೆಯೆ ಹೀಗೆ! ಈ ಸಂಸ್ಕೃತಿಯಲ್ಲಿ ಬುದ್ಧಿಗೆ ಲಗಾಮು ಇಲ್ಲ. ಆದರೆ ಹಳ್ಳಿಗಳಲ್ಲಿ ಬುದ್ಧಿಯ ಹಂಗಾಮೇ ಇಲ್ಲ. ಅದಕಾಗಿಯೆ ಹಳ್ಳಿಗಳ ಪುನರುದ್ಧಾರವನ್ನು ಕೈಕೊಳ್ಳಬೇಕಾಗಿದೆ. ಬುದ್ಧಿಯ ಸೊಕ್ಕನ್ನು ಅಡಗಿಸಬೇಕಾಗಿದೆ, ಸರಳತನದ ಸಂಪತ್ತನ್ನು ನಡೆಯಿಸಬೇಕಾಗಿದೆ. ಸಾರಾಂಶವೇನೆಂದರೆ, ಹಳ್ಳಿಗಳ ಪುನರುದ್ಧಾರ ಮಾಡಬೇಕಾದರೆ ಬುದ್ಧಿಯನ್ನು ಬಿಗಿದಿಟ್ಟು ಬಂಧಿಸಬೇಕು. ಯಾಕೆಂದರೆ, ಪರಮಾತ್ಮನಿರುವುದು ಎಲ್ಲರ ಹೃದಯದಲ್ಲಿ, ಬುದ್ಧಿಯಲ್ಲಲ್ಲ. ಹಳ್ಳಿಯ ಜೀವನಕ್ಕೆ ಪರಮಾತ್ಮನ ವಾತಾವರಣವು ಸಮಾಪಿಸಿದೆ.

ಆದ್ದರಿಂದ, ನಡೆಯಿರಿ ನಾವೆಲ್ಲರೂ ಹಳ್ಳಿಗೇ ಹೋಗೋಣ, ಬುದ್ಧಿಯ ಜೀವನವನ್ನು ಬಿಡೋಣ. ಹಾಗೆ ಮಾಡುವುದರಿಂದಾದರೂ ಲೇಖಗಳಿಗಾಗಿ ಸಂಪಾದಕರ ಕಾಟ ತಪ್ಪೀತು, ನಿಮಗೂ ಓದುವ ಬೇಸರು ತಪ್ಪೀತು.

ಅಗಸ್ಟ '೪೦

---

# ಲಢಾಯಿಯಲ್ಲಿ ಲೆಕ್ಕಣಿಕೆ

ಅರ್ಥಾತ್—ಏನೆಂದು ಹೇಳೋಣ? ಒಂದಕ್ಕೆ ಅರ್ಥವಾಗದೆ ಇದ್ದರೆ 'ಅರ್ಥಾತ್' ಎಂದು ಜೋಡಿಸಿ ಇನ್ನೊಂದು ಹೆಸರನ್ನು ಕೊಡುವುದು ಸಾಹಿತಿಗಳ ವಾಡಿಕೆ; ಉದಾಹರಣಾರ್ಥವಾಗಿ, 'ಪಂಪ-ಭಾರತ-ಅರ್ಥಾತ್–ನೀರಿಲ್ಲದ ನಾಗರಿಕರ ಅಜ್ಞಾತವಾಸ' ಎಂದು ಮುಂತಾಗಿ. ಆದರೆ ನಾವು ಕೊಟ್ಟ ಹೆಸರಿನ–ಅರ್ಥಾತ್- 'ಲಢಾಯಿಯಲ್ಲಿ ಲೆಕ್ಕಣಿಕೆ' ಎಂಬುದರ ಅರ್ಥವು ಸುಲಭವಿರಲು ಅರ್ಥಾತ್—ಹೆಚ್ಚಿಗೆ ಬರೆಯುವುದೇನು?

ವಾಚಕರೆ–ಅರ್ಥಾತ್–ತಿಳಿದುಕೊಂಡು ಓದುವಂಥಾತ್ತರಾದ ತಾವುಗಳಿರೆ, ಸದ್ಯಕ್ಕೆ ಯುದ್ಧ ನಡೆದುದು ನಿಮಗೆ ಗೊತ್ತಿರಬಹುದಷ್ಟೆ?' ಈ ಯುದ್ಧವು ಹಿಂದಿನ ಎಲ್ಲ ಯುದ್ಧಗಳಿಗಿಂತ ಬೇರೆಯಾದುದು' ಎಂದು ಬಲ್ಲವರು ಹೇಳುತ್ತಾರೆ. ಆ ಮಾತಿಗೆ ಅನೇಕ ಕಾರಣಗಳಿವೆ. ಒಂದು, ಈ

ಯುದ್ಧದಲ್ಲಿ ಮನೆಯಲ್ಲಿ ಕುಳಿತವರಿಗೂ ಸಾಯುವ ಪ್ರಸಂಗವಿದೆ; ಇನ್ನೊಂದು ಈ ಯುದ್ಧವು ಪೃಥ್ವಿಯ ಮಾನವರನ್ನೆ ಸಂಬಂಧಿಸಿದ್ದರೂ ಹೆಚ್ಚಾಗಿ ಆಕಾಶ ಪಾತಾಳಗಳಲ್ಲಿಯೆ ನಡೆಯುತ್ತಿದೆ. ಆದರೆ ಇವೆಲ್ಲಕಿಂತ ಮಹತ್ತ್ವದ್ದಾದ ಒಂದು ಕಾರಣವಿದೆಯಂತೆ; ಅದೆಂದರೆ ಈ ಯುದ್ಧದಿಂದ ಮಾನವಸಂಸ್ಕೃತಿಯ ಮೇಲೆ ಸರ್ವವಿಧದಿಂದಲೂ ಪರಿಣಾಮವಾಗದೆ ತಪ್ಪದಂತೆ. ಆದ್ದರಿಂದ— ಎಂದರೆ, ಅರ್ಥಾತ್—ಸಾಹಿತ್ಯ ಮತ್ತು ಸಾಹಿತಿಗಳ ಮೇಲೂ ಕ್ರಾಂತಿಕಾರಕ ಪರಿಣಾಮವಾಗಬಹುದೆಂದು ಊಹಿಸಬಹುದಲ್ಲವೆ? ಈ ಮಾತೇ 'ಲಢಾಯಿ-ಯಲ್ಲಿ ಲೆಕ್ಕಣಿಕೆ' ಎಂಬ ಶಿರೋಲೇಖದಿಂದ ಸಂಕೇತಿತವಾಗಿದೆ, ಅರ್ಥಾತ್ ಆ ಪರಿಣಾಮವೆಂತಹದೆಂಬುದನ್ನು ವಿವರಿಸುವುದು ಲೇಖದ ಉದ್ದೇಶವಾಗಿದೆ.

ಮೊದಲ ಮಾತೆಂದರೆ, ಇಂದಿನ ಯುದ್ಧದಿಂದ ಸಾಹಿತಿಗಳ ದೃಷ್ಟಿ ಕೋಣವೆ (ಸಾಮಾನ್ಯರ ದೃಷ್ಟಿಕೋಣದಿಂದ ಇದು ಬೇರೆಯಾಗಿದೆ) ಬದ-ಲಾಗುವುದು. ಇಂದಿನವರೆಗೆ ಸಾಹಿತಿಗಳು ಆಕಾಶ—ಪಾತಾಳಗಳ ಕಡೆಗೆ ತಮ್ಮ ದೃಷ್ಟಿಯನ್ನಿಡುತ್ತಿದ್ದರು, ಧೈರ್ಯದಿಂದ ಇಡುತ್ತಿದ್ದರು. ಆ ಸ್ಥಳ-ಗಳಲ್ಲಿ ಏನೂ ಇಲ್ಲದ್ದರಿಂದ ಅವರ ಕಲ್ಪನೆಗೆ ಬೇಕಾದಷ್ಟು ಅನುವು ದೊರೆ-ಯುತ್ತಿದ್ದಿತು; ಸ್ವರ್ಗಗಳನ್ನು ಸೃಷ್ಟಿಸುತ್ತಿದ್ದರು, ನರಕಗಳನ್ನು ನಿರ್ಮಿಸು ತ್ತಿದ್ದರು. ಇಲ್ಲದಲ್ಲಿ ಇದ್ದುದಂತೆ ಮಾಡಲು ದೊರೆಯುವ ಈ ಅನವಕಾಶ ದಿಂದ ಕಾವ್ಯಕ್ಕೆ ಕಳೆ ಏರುತ್ತಿದ್ದಿತು. ಆದರೆ ಇಂದು ಆ ಪರಿಸ್ಥಿತಿಯಲ್ಲಿ ಅದಲುಬದಲಾಗಿದೆ. ಆಕಾಶವೆಲ್ಲ ವಿಮಾನಗಳಿಂದ ತುಂಬಿದೆ; ಕಾಲ್ಪನಿಕ ಪುಷ್ಪಕ, ಆವರ್ತಕ ಮುಂತಾದುವುಗಳಲ್ಲ; ಫಾಯಿಟರ್, ಬೊಂಬರ್, ಸ್ತುಕಾ, ಯುಂಕರ ಮೊದಲಾದ ವಾಸ್ತವಿಕ ವಿಮಾನಗಳಿಂದ. ಅದರಂತೆ ಪಾತಾಳದಲ್ಲಿ ಸಬ್‌ಮರೀನುಗಳಿವೆ, ಡೆಪ್ಥ ಚಾರ್ಜುಗಳಿವೆ, ಮುಳುಗಿದ ಹಡಗಗಳಲ್ಲಿಯ ಮದ್ದು-ಗುಂಡುಗಳೂ ಮಾನವ ದಂಡುಗಳೂ ಮಹಾನ್ ಮಹಾನ್ ಮಹಾನ್ ಸಂಸಾರಗಳೂ ಇವೆ. ಸಾಹಿತಿಗಳ ಮಾತಂತಿರಲಿ, ಕ್ಷೀರಸಾಗರದಲ್ಲಿ ಒರಗಿದ ವಿಷ್ಣುವು ಸಬ್‌ಮರೀನಿಗೂ ಕೈಲಾಸದಲ್ಲಿದ್ದ ಶಿವನು ವಿಮಾನದಾಳಿಗೂ ಭಯಪಡುವಂತಹ ಯಂತ್ರದ ಸರ್ವಾಧಿಕಾರಿತ್ವ ಯುಗದ ಯುದ್ಧವಿದು. ಹೀಗಾಗಿ ಬಡಸಾಹಿತಿಯು ಆಕಾಶ-ಪಾತಾಳ ಗಳನ್ನು ಬಿಟ್ಟು ಬರಿಯ ಭೂಲೋಕವನ್ನೆ ನೋಡಬೇಕಾಗುವುದು. ಸುಖ-

ದುಃಖಮಯ ಸಂಸಾರದ ರಂಗಸ್ಥಲವಾದ ಈ ಹಾಳು ಭೂಲೋಕದಲ್ಲಿ ಕಲ್ಪ-
ನೆಗೆ ಸ್ಫೂರ್ತಿ ದೊರೆಯುವುದೆಂತು? ಯಾಕೆಂದರೆ ಹಾಳಾದ ನಗರಗಳೂ
ಬೀಳುತ್ತಲಿದ್ದ ಕಟ್ಟಡಗಳೂ ಕುರುಡ-ಕುಂಟ-ಕಡಿತಗಳಿಂದ ಬಳಲುವ ನರ-
ಪ್ರೇತಗಳೆ ಕಾಣಬಹುದು! ಅಂತೂ ತಾತ್ಪರ್ಯವೇನು? ಸಾಹಿತಿಯು ತನ್ನ
ಕೋಣದ ಹಗ್ಗವನ್ನು ಹಿಡಿದೆಳೆಯಲೇಬೇಕಾಗುವುದು.

ಕೋಣ ಹೀಗೆ ಬದಲಾಯಿಸುವುದಕ್ಕೇ ಸಾಹಿತಿಯ ಸಂಕಷ್ಟ ಮುಗಿ
ಯಲಿಲ್ಲ. ಕೋಣಕ್ಕೆ ಸರಿಯಾಗಿ ಕಟ್ಟಡವು ಬದಲಾಯಿಸಬೇಕಾಗುವುದು.
ಅರ್ಥಾತ್-ಶೈಲಿಯೂ ಬೇರೆಯಾಗಬೇಕಾವುದು. 'ಗಾಳಿಯ ವೇಗದಂತೆ'
ಎಂದು ಹೇಳುವ ಕವಿ ಗಾಳಿಪಾಲಾಗುವನು; 'ವೇಗದಲ್ಲಿ ವಿಮಾನದಂತೆ,
ಜಂಬದ ಬಾಂಬಿನಂತೆ' ಎಂದು ನೂತನವಾಗಿ ಬರೆಯುವವನೆ ಬದುಕುವನು.
'ಸಂಸಾರವು ನಾಲ್ಕು ಗಳಿಗೆಯ ಆಟ' ಎಂಬುದು ಹಳೆಯ ಪುರಾಣವೆನಿಸು
ವುದು; 'ಒಂದು ಗಳಿಗೆ ಕೂಡ ತಾಳದ ಮಾಟ' ಎಂಬುದು ಪ್ರಗತಿಪರವಾದ
ಆಧುನಿಕ ವಿಚಾರವಾಗುವುದು. 'ಕಪಿಕುಲದಲ್ಲಿ ಹನುಮಂತನು ವಾಯು-
ದೇವರ ಮಗನು' ಎಂದರೆ ಮುಗಿಯಲಿಲ್ಲ; ಮುಂದೆ 'ಶಿಂಪನೀರ್ಝನು ವಿಷ
ವಾಯುದೇವರ ಮಗನು' ಎಂದು ಮಾತನ್ನು ಪೂರ್ತಿಗೊಳಿಸಬೇಕಾಗುವುದು.
'ಹಗಲಿನಲ್ಲಿ ಎರಡು ವಿಧಗಳಿವೆ ಒಂದು ಬಿಳಿ ಹಗಲು ಒಂದು ಕರೆಹಗಲು
(Black out)' ಎಂದು ಮಕ್ಕಳಿಗೆ ಹೊಸ ಪಾಠ ಕಲಿಸಬೇಕಾಗುವುದು.
'ಇದೆಲ್ಲ ಇತಿಹಾಸವನ್ನು ಬರೆದವರ, ಭೂಗೋಲವನ್ನು ರಚಿಸುವವರ ಕೆಲಸ,
ಇದರಲ್ಲಿ ಸಾಹಿತಿಯ ಸಂಬಂಧವೇನು?' ಎಂದು ಕೇಳಬೇಡಿರಿ. ಯಾಕೆಂದರೆ
ಯುದ್ಧದ ತರುವಾಯದ ಜಗತ್ತಿನಲ್ಲಿ ಎಲ್ಲ ಅಳಿದು ಸಾಹಿತ್ಯ ಒಂದೇ ಉಳಿ
ಯುವುದು. ಉಳಿಯಬಾರದೇಕೆ? ಇತಿಹಾಸವು ಮಾನವನಿಗೆ ಅನುಭವ
ವನ್ನು ಕಲಿಸಲೊಲ್ಲದು; ಭೂಗೋಲಪಾಠವು ಇಂದಿನಂತೆ ನಾಳೆ ಉಳಿಯ
ಲೊಲ್ಲದು! ಇಂತಹ ಕ್ಷಣಭಂಗುರ ವಿಷಯಗಳಿಂದ ಯಾರಿಗೆ ಲಾಭವಾಗು
ವಂತಿದೆ? ಸಾಹಿತ್ಯದ ಮಾತು ಬೇರೆ. ಸುಖವಿಲ್ಲದಲ್ಲಿ, ಸೌಂದರ್ಯವಿಲ್ಲ
ದಲ್ಲಿ, ಸತ್ಯವಿಲ್ಲದಲ್ಲಿ ಅವನ್ನು ಹುಡುಕುವ ಬಿಸಿಲ್ಗುದುರೆಯ ಬೆರಗಾಟ
ಸಾಹಿತ್ಯವೆಂದರೆ ಈ ಯುದ್ಧದಿಂದ ಸತ್ಯ-ಸುಖ-ಸೌಂದರ್ಯಗಳು
ಇನ್ನಿಷ್ಟು ಅಸಂಭವನೀಯವೆನಿಸಬಹುದಾದ್ದರಿಂದ, ಸಾಹಿತ್ಯಕ್ಕೆ ಇನ್ನೂ

ಚುರುಕಾದ ಸ್ಫೂರ್ತಿ ಸಿಕ್ಕುವುದು. ಹಾಗೆ ಸ್ಫೂರ್ತಿಗೊಂಡು ಮೈಮರೆತಾಗ ಯಾವ ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕಾಗುವುದೆಂಬುದನ್ನು ನಾನಿಲ್ಲಿ ವಿವರಿಸುತ್ತಲಿದ್ದೇನೆ.

ಶೈಲಿ ಬೇರೆಯಾಗಬೇಕೆಂದು ಮೇಲೆ ಹೇಳಿದೆಯಷ್ಟೆ? ಹಾಗೆಂದರೇನು? ನೋಡಿರಿ, ಇಂದು ಸಾಹಿತಿಗಳು ಕವಿತೆಯನ್ನು ಬರೆಯುತ್ತಾರಲ್ಲವೆ? ಆ ಕಾವ್ಯದ ಶೈಲಿ ಹೇಗಿದೆ? ನದಿಗಳ ತೆರೆಗಳಂತೆ, ಸುಳಿಗಾಳಿಯ ಸುಯ್ದಾಟದಂತೆ, ಹೃದಯದ ಹಾರಾಟದಂತೆ ಅದರಲ್ಲಿ ತಾಳವಿದೆ, ಮೇಳವಿದೆ, ಕಳೆ ಇದೆ ಆದರೆ ಇನ್ನು ಮುಂದೆ ಈ ಶೈಲಿ ನಮ್ಮನ್ನು ಹೇಗೆ ತೃಪ್ತಿಗೊಳಿಸೀತು? ವರ್ಷಾನುವರ್ಷ ಯುದ್ಧದ ವಾತಾವರಣದಲ್ಲಿ ಬೆಳೆಯುವ ನಮಗೆ ಟಾರ್ಪೆಡೊದಂತೆ ಸಿಡಿಯುವ, ಬಾಂಬಿನಂತೆ ಅಬ್ಬರಿಸುವ, ವಿಷವಾಯುವಿನಂತೆ ಮೋಹಗೊಳಿಸುವ, ಪ್ರಚಾರಶಾಸ್ತ್ರದಂತೆ ಶಬ್ದಜಾಲವನ್ನು ಪಸರಿಸುವ, ಆಕಾಶವಾಣಿಯಂತೆ ಶ್ರವಣಪೇಯವಾದ ಶೈಲಿಯೆ ನಮಗೆ ಇಷ್ಟವೆನಿಸಿದರೆ ಆಶ್ಚರ್ಯವೇನು? ನಮ್ಮ ರೇಡಿಯೊ ಯಂತ್ರವನ್ನು on (ಹಚ್ಚು) ಮತ್ತು off (ಮುಚ್ಚು) ಮಾಡುವಂತೆ, ಕವಿಯನ್ನೆ on and off ಮಾಡಲು ಶಕ್ಯವಿದ್ದ ಶೈಲಿ ನಮಗೆ ಹೆಚ್ಚು ಅನುಕೂಲವೆನಿಸುವುದು. ಆದಕಾಗಿ ಉದ್ದುದ್ದ ಕತೆ-ಕಾದಂಬರಿಗಳ ಧಾಟಿಯನ್ನು ಲೇಖಕನು ಬಿಡಬೇಕಾಗುವುದು. ಅವನ ಒಂದು ಇಡಿಯ ಗ್ರಂಥವು ಬಹಳವಾದರೆ ಒಂದು record (ಗ್ರಾಮೊಫೋನ ರೆಕಾರ್ಡ್)ನ ಎರಡೂ ಬದಿಗಳಿಗೆ ಸಾಲುವಷ್ಟಿರಬೇಕು.

ಶೈಲಿಯ ಸಂದರ್ಭದಲ್ಲಿ ಇನ್ನೂ ಒಂದು ಮಾತನ್ನು ಹೇಳಬಹುದು. ಧ್ವನಿವಾಹಕ ಯಂತ್ರ (telephone) ದೊಡನೆ ಇಂದು ಚಿತ್ರವಾಹಕತೆಯೂ ಸೇರಿದೆ. ಎಂದರೆ ದೂರದಿಂದ ಮಾತನಾಡುವವನ ಮಾತುಗಳು ಕೇಳಿಸುವವಲ್ಲದೆ, ಅವನೇ ಅದರ ಜೊತೆಗೆ ಕಾಣಿಸುವನು. ಅದಕಾಗಿ ಸಾಹಿತಿಗಳು ಎಚ್ಚರದಿಂದಿರಬೇಕಾಗುವುದು. ಮಲಗುವಾಗಲೊ ಮತ್ತೆಲ್ಲಿರುವಾಗಲೊ ಸ್ಫೂರ್ತಿಬಂದರೆ ಅದನ್ನು ತಡೆಯಬೇಕಾಗುವುದು. ಉತ್ತಮವಾದ ಬಟ್ಟೆಗಳನ್ನು ಧರಿಸಿ, ತಲೆಗೂದಲನ್ನು ಬಾಚಿ, ಓರಣದಿಂದಿರುವಾಗಲೇ ಸ್ಫೂರ್ತಿ ಬರಬೇಕು— ಇಲ್ಲವಾದರೆ ಚಿತ್ರವೂ ಮೂಡಿ ಸ್ವರೂಪನಾಶವಾದೀತು!

ಬಾಹ್ಯದೃಷ್ಟಿಯಿಂದ ನೋಡಿದರೆ ಕೂಡ ಯುದ್ಧದ ನಿಮಿತ್ತದಿಂದ ಸಾಹಿತ್ಯದಲ್ಲಿ ಕ್ರಾಂತಿಯಾಗುವುದಗತ್ಯ ಎಂಬುದು ಸ್ಪಷ್ಟವಿದೆ. ಮೊದಲ ಮಾತೆಂದರೆ, ಗ್ರಂಥಕರ್ತನು ತನ್ನ ಗ್ರಂಥದ ಎಷ್ಟು ಪ್ರತಿಗಳನ್ನು ಪ್ರಕಟಿಸಬೇಕು?.... ಸದ್ಯಕ್ಕೆ ಕನ್ನಡ ಗ್ರಂಥಕರ್ತರೆಲ್ಲ ಪ್ರತಿಯೊಂದು ಗ್ರಂಥದ ಸಾವಿರ ಪ್ರತಿಗಳನ್ನು ಸಿದ್ಧಪಡಿಸುವರು. ಕರ್ನಾಟಕದಲ್ಲಿ ಚಹದ ಅಂಗಡಿಗಳ ಸಂಖ್ಯೆಗೆ ಹಚ್ಚಿ ನೋಡಿದರೆ ಸಾವಿರವೆಂದರೆ ಬಹಳೇ ಸ್ವಲ್ಪ ಎಂದೆನಿಸಬಹುದು. ಆದರೆ ಈ 'ಫರಾಳ ಪ್ರಪಂಚ'ದಲ್ಲಿ ವೃತ್ತಪತ್ರಗಳಿಗೇ ಹೆಚ್ಚಿನ ಮಹತ್ತ್ವವಿದೆ. ಅರ್ಥಾತ್ ಪತ್ರಿಕೆಗಳೆ ಹೆಚ್ಚು ಉಪಯುಕ್ತವಾಗಿವೆ. ಈ ಮೇಲಾಟದಲ್ಲಿ ಗ್ರಂಥಗಳಿಗೆ ಹೆಚ್ಚು ಅವಕಾಶ ದೊರೆಯುವುದಿಲ್ಲವಾದ್ದರಿಂದ, ಸಾವಿರ ಪ್ರತಿಗಳೇ ಸಾಕೆನಿಸುವುವು. ಆದರೆ ಯುದ್ಧದ ನಿಮಿತ್ತದಿಂದ ಪರಿಸ್ಥಿತಿ ಬದಲಾಯಿಸಿದೆ. 'ರದ್ದೀ ಪೇಪರಿ'ನ ಧಾರಣಿ ಏರಿದೆ— ಅದಕಾಗಿ ಹೆಚ್ಚು ಪ್ರತಿಗಳನ್ನು ಹೊರಡಿಸಬಹುದೆಂದು ಎನಿಸುವುದು. ಆದರೆ ತುಸು ವಿಚಾರ ಮಾಡಿದಲ್ಲಿ ತೀರ ವಿಪರೀತ ಪರಿಸ್ಥಿತಿಯೆ ಕಂಡುಬರುವುದು. ಸಾಮಾನ್ಯವಾಗಿ ಪ್ರತಿಯೊಬ್ಬ ಗ್ರಂಥಕರ್ತನೂ ತನ್ನ ಗ್ರಂಥವನ್ನು ಓದುವ ಜನರಿದ್ದಾರೆ ಎಂದು ಭಾವಿಸಿಕೊಳ್ಳುವುದು ವಾಡಿಕೆಯಾಗಿದೆ. ಈ ಭಾವನೆಯಿಂದ ಹೆಚ್ಚಿನ ತಾಪತ್ರಯವಿಲ್ಲದ ಕಾಲದಲ್ಲಿ ಸಾವಿರಪ್ರತಿಗಳನ್ನು ಹೊರಡಿಸಿದರೆ. ಯುದ್ಧದ ತರುವಾಯ– ಎಂದರೆ ಲಕ್ಷಾವಧಿ ಜನರು (ಇವರೆಲ್ಲರೂ ಓದುವ ವಯಸ್ಸಿನವರೆ) ರಣಾಂಗಣದಲ್ಲಿ ಮಡಿದ ತರುವಾಯ—ಎಷ್ಟು ಪ್ರತಿಗಳನ್ನು ಹೊರಡಿಸಬೇಕು? ಪ್ರಶ್ನೆಯನ್ನೇನೋ ಕೇಳಿರುವೆ, ಆದರೆ ಉತ್ತರವನ್ನು ಮಾತ್ರ ದಯವಿಟ್ಟು ಗಣಿತ ಶಾಸ್ತ್ರಜ್ಞರೆ ಕೊಡಬೇಕೆಂದು ಬೇಡುವೆ! ಯಾಕೆನ್ನುವಿರಾ? ಲೆಕ್ಕಬಿಡಿಸಲು ಪ್ರಮಾಣ ಕಂಡುಹಿಡಿಯಲು ನೀವೇ ಪ್ರಯತ್ನ ಮಾಡಿನೋಡಿರಿ. ಇನ್ನೊಂದು ಮಾತು-ಒಂದು ವೇಳೆ ಯುದ್ಧದಲ್ಲಿ ಯಾರೂ ಆಹುತಿಯಾಗಲಿಲ್ಲ ಎಂದು ತಿಳಿಯಿರಿ, ಎಲ್ಲರೂ ಸುರಕ್ಷಿತ ಮರಳಿ ಬರುವರೆಂದು ತಿಳಿಯಿರಿ. ಹಾಗೆ ತಿಳಿದಲ್ಲೂ ಸುಖವಿಲ್ಲ. ಯಾಕೆಂದರೆ ಜಗತ್ತಿನ ಖಂಡೋಪಖಂಡಗಳನ್ನು ವರ್ಷಾನುವರ್ಷ ಅಲೆದು ಬಂಧವರಿಗೆ ಯಾವ ಭಾಷೆ ರೂಢಿಯಲ್ಲುಳಿದಿರುವುದು? ಅವರ ಅನುಭವದ ಭಾಷೆಯಲ್ಲಿಯೆ ಬರೆಯುವುದೆಂದರೆ ಕಾಯಿದೆಕಾನೂನು ಅಡ್ಡಬರಬಹುದು!

ಇದಲ್ಲದೆ ಬಾಹ್ಯದೃಷ್ಟಿಯಿಂದ ವಿಚಾರಮಾಡಿದರೆ ಅಥವಾ ಹೆಚ್ಚೇನು? –ಉದಾಹರಣಾರ್ಥವಾಗಿ ಒಂದು ಮಹತ್ತ್ವದ ಮಾತನ್ನು ಹೇಳಿ-ಬಿಡುವೆ, ಎಂದರೆ ಒಟ್ಟು ಪರಿಸ್ಥಿತಿಯ ಕಲ್ಪನೆ ತಮಗೆ ಸುಲಭವಾಗಿ ಬಂದೀತು. ಆ ಮಹತ್ತ್ವದ ಮಾತೆಂದರೆ, ಇನ್ನು ನಾನೀ ಲೇಖನವನ್ನು ಮುಗಿಸುವೆ. ಇದೆಂತಹ ಮಹತ್ತ್ವದ ಮಾತು ಎನಬೇಡಿರಿ. ಯಾಕೆಂದರೆ, ಯುದ್ಧದ ನಿಮಿತ್ತದಿಂದ ಕಾಗದವು ಕೇವಲ ತುಟ್ಟಿಯಾಗಿಲ್ಲ, ದೊರೆಯು-ವುದೆ ದುರ್ಲಭವಾಗಿದೆ. ಆದ್ದರಿಂದ ಬರೆಯುವುದನ್ನು ಬೇಗ ಮುಗಿಸುವುದು ಅತ್ಯಂತ ಮಹತ್ತ್ವದ್ದಾಗಿದೆ. ಶಕ್ಯವಾದರೆ ಮೊದಲು ಮುಗಿಸಿ ಆ ಮೇಲೆ ಬರೆಯಬೇಕು— ಇಹಕ್ಕೆ ಸುಖ, ಪರರಿಗೆ ಮೋಕ್ಷ!

**ಮಾರ್ಚ್ ೧೯೪೨**

---

# ದೋಸೆಯ ಪ್ರಾಣಹಿಂಸೆ

ಪಾಲಘಾಟ ಎಂಬಲ್ಲಿ ವೀರನೊಬ್ಬನು ಇಡಿಯ ದೋಸೆಯನ್ನು ಒಂದೇ ತುತ್ತಿಗೆ ನುಂಗುವ ಯತ್ನದಲ್ಲಿ ಜೀವಕ್ಕೆ ಎರವಾದನೆಂಬ ಸುದ್ದಿ ಕನ್ನಡ ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು. ಇಂತಹ ಘಟನೆಯು ಸುಸಂಸ್ಕೃತ ಯುರೋಪೀಯ ರಾಷ್ಟ್ರಗಳಲ್ಲಿ ಘಟಿಸಿದ್ದರೆ ಎಂತಹ ಸಾಂಸ್ಕೃತಿಕ ಆಲ್ಲೋಲ ಕಲ್ಲೋಲವಾಗುತ್ತಿತ್ತೆಂಬುದರ ಕಲ್ಪನೆ ಕನ್ನಡ ವಾಚಕರಿಗಷ್ಟೆ ಅಲ್ಲ, ಕನ್ನಡ ವೃತ್ತಪತ್ರಕರ್ತರಿಗೂ ಇದ್ದಂತೆ ತೋರುವುದಿಲ್ಲ. ಇಲ್ಲವಾದರೆ ಅದನ್ನೋದಿದ ವಾಚಕರು ಹೀಗೆ ಅಲಕ್ಷವನ್ನು ತೋರಿಸುತ್ತಿದ್ದರೆ? ಅದರ ಪ್ರಕಟನೆಯನ್ನು ಹೀಗೆ ಸಣ್ಣ ಪ್ರಮಾಣದಲ್ಲಿಯುಷ್ಟೆ ಮಾಡುತ್ತಿದ್ದರೆ? ಅಂತಹ ಘಟನೆಯಿಂದ ಯುರೋಪೀಯ ವಾಚಕರಲ್ಲಿ ಆವೇಶ ಬರುತ್ತಿದ್ದಿತು. ದೋಸೆಯನ್ನು ಒಂದು ತುತ್ತಿನಲ್ಲಿ ನುಂಗುವಾಗ ಒಬ್ಬ ಮಾನವನ ಜೀವ ಹೋಯಿತಲ್ಲವೆ? ಇದು ಮಾನವನ ಅಪಮಾನ! ದೋಸೆ ನುಂಗುವ ಯೋಗ್ಯತೆ ಮಾನವನಿಗಿಲ್ಲ ಎನಬಹುದೆ! – ಎಂದು ಕನಲಿ ಅನೇಕರು

ಆ ಪ್ರಯತ್ನವನ್ನು ಕೈಕೊಳ್ಳುತ್ತಿದ್ದರು; ಕೊನೆಗೆ ಅದನ್ನು ಸಾಧಿಸಿಯೇ ಬಿಡುತ್ತಿದ್ದರು; ಇದಕ್ಕೂ ಮುಂದೆ ಹೋಗಿ ಬಿಸಿ ಬಿಸಿ ದೋಸೆಯನ್ನು ಒಂದೇ ತುತ್ತಿನಲ್ಲಿ ನುಂಗಿ ನುಚ್ಚು ಮಾಡುತ್ತಿದ್ದರು; ಹೊಟ್ಟೆಯೊಳಗಿಟ್ಟ ಭಾಜಿ ಸಹಿತವಾಗಿ ಅಲ್ಲ, ಬೇರೆಯಾಗಿ ಕೊಟ್ಟ ಚಟ್ಣಿ ಸಹಿತವಾಗಿ ಅದರ ಧ್ವಂಸಮಾಡುತ್ತಿದ್ದರು. ಇಷ್ಟೊಂದು ಹುಮ್ಮಸ ಅವರಿಗೆ! ಇಂತಹ ಪ್ರಗತಿ-ಪರ ಕ್ರಾಂತಿಮಯ ಸುಸಂಸ್ಕೃತಿಯವರದು! ಕೊನೆಗೆ ಮೊದಲು ಸತ್ತ ವೀರನ ಸ್ಮರಣಾರ್ಥವಾಗಿ 'ಪಾಲಘಾಟ ದೋಸೆ' ಎಂಬ ಫ್ಯಾಶನ (Fashion ವನ್ನಾಗಲಿ, 'ದೋಸೆ ಬೀದಿ' ಯನ್ನಾಗಲಿ, 'ದೋಸೆ ಧ್ವಜಸ್ತಂಭ'ವನ್ನಾಗಲಿ (ಕಾಲ್ಕೆಳಗೆ ದೋಸೆಯನ್ನು ಮುಟ್ಟುವ ವೀರಮೂರ್ತಿಯೊಂದು ನಿಲ್ಲಿಸುತ್ತಿದ್ದರು.

ಇನ್ನು ನಮ್ಮವರ ಮಾತೇ ಬೇರೆ. 'ದೋಸೆ ನುಂಗುವಾಗ ಜೀವ ಬಿಟ್ಟನೆ? ಆಸೆಬುರುಕ ಮುಂಡೇದ್ದು!' ಎನುವವರು ಕೆಲವರು; 'ಹಿಂದಿನ ಜನ್ಮದೊಳಗೆ ಅನ್ನದಾನ ಮಾಡಿರಲಿಕ್ಕಿಲ್ಲ; ಅಂತೇ ಈ ಜನ್ಮದೊಳಗ ತಿನ್ನುವಾಗ ಸಾವು ಬಂತು' ಎಂದು ತತ್ವಜ್ಞಾನ ಹೇಳುವವರು ಕೆಲವರು; 'ಪ್ರತಿಯೊಂದು ದೋಸೆಯ ಅಂಗಡಿಯೊಳಗೆ ಇವನ ದೆವ್ವ ಇನ್ನು ಸುತ್ತಾಡೋದು!' ಎಂದು ಶಾಸ್ತ್ರ ಹೇಳುವವರು ಇನ್ನು ಕೆಲವರು; 'ತಿನ್ನಲಿಕ್ಕೆ ಇಲ್ಲದೆ ಸಾಯೋ ಹಿಂದುಸ್ತಾನದೊಳಗೆ ತಿಂದು ಸತ್ತು ಹೆಸರಾದ' ಎಂದು ಪಾಂಡಿತ್ಯವನ್ನು ಮೆರೆಯಿಸುವವರು ಕೆಲವರು; 'ದೋಸೆ ಅಪಾಯಕಾರಕ ಅಂತ ನಾ ಯಾವಾಗಲೂ ಹೇಳುತಿದ್ದೆ' ಎಂದು ಮಡಿಮಾಡುವುದಕ್ಕಾಗಿ ತನಗೆ ದೋಸೆ ದೊರೆಯದ ಮತ್ಸರದಿಂದ ಆಡಿಕೊಳ್ಳುವವರೂ ಕೆಲವರು; 'ಕಟ್ಟೋದು ಕಟ್ಟೆ ಎಂಥಾ ಜಿದ್ದು ಕಟ್ಟಿದನೊ ಅಪದ್ಧ!' ಎಂದು ಅಣಕ-ವಾಡುವವರು ಕೆಲರು; ಅಂತೂ ಯಾವುದೆ ಒಂದು ಕಾರಣವನ್ನು ಮುಂದೆ ಚಾಚಿ ದೋಸೆಗಾಗಲಿ ಅದನ್ನು ತಿಂದು ಸತ್ತ ವ್ಯಕ್ತಿಗಾಗಲಿ ದೋಷಣೆಯನ್ನು ಕೊಡುವವರೆ! ಇಂತಹ ಮಾತುಗಳು ನಮ್ಮ ನಿರ್ಜೀವ ಸಂಸ್ಕೃತಿಯ ದ್ಯೋತಕ ಎಂದು ನನ್ನ ಅಭಿಪ್ರಾಯ.

ದೋಸೆಗೆ ದೂಷಣ ಕೊಡುವುದು ಸರಿಯಾದುದೆ- ಎಂಬುದನ್ನು ಮೊದಲು ವಿಚಾರಿಸಿ ನೋಡೋಣ. ಗುಡಿಗೆ ಹೋಗುವಾಗ ಎಡವಿಬಿದ್ದು

ಸತ್ತ ಮನುಷ್ಯನನ್ನು ಕಂಡು ಯಾರಾದರೂ ದೇವನಿಗೆ ದೋಷಣೆ ಕೊಡು-ವರೆ? ಯಾಕೆ ಕೊಡಬಾರದು ? ದೇವನಿದ್ದಿಲ್ಲವಾದರೆ ಗುಡಿ ಇರುತ್ತಿರಲಿಲ್ಲ. ಗುಡಿ ಇದ್ದಿಲ್ಲವಾದರೆ ಆ ವ್ಯಕ್ತಿ ಸಾಯುತ್ತಿರಲಿಲ್ಲ. ಅಂತೂ ಅವನ ಸಾವಿಗೆ ದೇವನೇ ಕಾರಣನಾದನಲ್ಲವೆ? ಆದರೂ ದೇವನಿಗೆ ಯಾರೂ ದೂಷಣೆ ಕೊಡುವುದಿಲ್ಲ ದೋಸೆಗೆ ಏಕೆ ಅಂತಹ ಸಂದರ್ಭದಲ್ಲಿ ದೂಷಣೆಯನ್ನು ಕೊಡಬೇಕು? 'ದೇವನು ದೊಡ್ಡವನು, ದೋಸೆ ನಿರ್ಜೀವ ಕ್ಷಣಿಕವಸ್ತು ಮಾತ್ರ' ಎಂದು ಯಾರಾದರೂ ಹೇಳಿದರೆ ನಾನು ಎಂದಿಗೂ ಒಪ್ಪಲಿಕ್ಕಿಲ್ಲ. ದೋಸೆಯ ಯೋಗ್ಯತೆ ಕೂಡ ದೇವನಷ್ಟೆ ಇದೆ ಎಂಬುದನ್ನು ನಾನು ಬೇಕಾ-ದಷ್ಟು ಪ್ರಮಾಣಗಳನ್ನು ಕೊಟ್ಟು ಸಿದ್ಧಮಾಡಿ ತೋರಿಸಬಲ್ಲೆ.

ದೋಸೆಯ ಮಹಿಮೆಯ ವರ್ಣನೆಯನ್ನು ಯಾವ ದೃಷ್ಟಿಯಿಂದ ಪ್ರಾರಂಭಿಸಬೇಕೆಂಬುದು ಕೂಡ ಕಷ್ಟವಾಗಿದೆ, ಅಷ್ಟೊಂದು ಸರ್ವತೋ ವ್ಯಾಪ್ತವಿದೆ ಆ ಮಹಿಮೆ! 'ದೋಸೆವಾಕ್ಯ' ಎಂಬ ಉಪನಿಷತ್ತಿನಲ್ಲಿ ಹೀಗೆ ಹೇಳಿದೆ:—

**ಚೂರ್ಣಮದ : ಚೂರ್ಣಮಿದಂ ಚೂರ್ಣಾತ್ ಚೂರ್ಣಮುದಚ್ಯತೇ।**
**ಚೂರ್ಣಸ್ಯ ಚೂರ್ಣಮಾದಾಯ ಚೂರ್ಣಮೇವಾವಶಿಷ್ಯತೆ॥**

'ಚೂರ್ಣ ಮಾಡಿದರೆ ಮದವೇರುವುದು, ಚೂರ್ಣ ಮಾಡಲು ಮಿದು-ವಾಗಿರುವುದು, ಚೂರ್ಣ ಮಾಡಿದಂತೆ ಮುದ (ಸಂತೋಷ) ಎನಿಸುವುದು. ಚೂರ್ಣ ಮಾಡಿ ಮಾಡಿ ಎಷ್ಟು ಮಾಡಿದರೂ ಇನ್ನಿಷ್ಟು ಚೂರ್ಣ ಮಾಡ-ಬೇಕೆನಿಸುವುದು, ಅಥವಾ ಚೂರ್ಣ ಮಾಡಬೇಕೆಂಬ ಇಚ್ಛೆ ಇನ್ನೂ ಉಳಿ-ಯುವುದು.

ಭಗವದ್ಗೀತೆಯಲ್ಲಾದರೂ 'ವೇದಾನಾಂ ಸಾಮವೇ ದೋಸಿ' ಎಂದು ದೋಸೆಯ ಉಲ್ಲೇಖವಿದೆ. ಇಷ್ಟೇಕೆ? ಶಂಕರಾಚಾರ್ಯರ ಪರಬ್ರಹ್ಮನೆಂದರೆ ದೋಸೆಯೆ ಎಂದು ತಜ್ಞರನೇಕರು ಹೇಳಿದ್ದಾರೆ. ಇಲ್ಲದ ವಸ್ತುಗಳನ್ನೂ ಸಲ್ಲದ ಜಗತ್ತನ್ನೂ ಕೂಡಿಕೊಂಡಿದ್ದಾನಂತೆ ಶಂಕರಾಚಾರ್ಯರ ಬ್ರಹ್ಮ, ಅದರರ್ಥವೇನು? ಸೊನ್ನೆಗಳಿಂದ ಕೂಡಿಕೊಂಡು ಸದಾತ್ಮಕನಾಗಿದ್ದಾ-ನೆಂದಲ್ಲವೆ? ದೋಸೆಯ ಸ್ವರೂಪವಾದರೂ ಇದೇ ಅಲ್ಲವೇ? ಸೊನ್ನೆ (ತೂತು)ಗಳಿಂದ ಕೂಡಿಕೊಂಡಿದ್ದರೂ ದೋಸೆಯು ಸದಾತ್ಮಕವಸ್ತುವಾಗಿದೆ.

ಈ ಸದಾತ್ಮಕ ವಸ್ತುವಿನ ಸೇವನೆಯಿಂದ ಚಿತ್ತಕ್ಕೆ ಆನಂದವಾಗುವುದೆಂದು ಇದಕ್ಕೆಯೆ ಸಚ್ಚಿದಾನಂದ ಎಂದು ಹೆಸರಿದೆಯಂತೆ!

ತತ್ವಜ್ಞಾನದ ದೃಷ್ಟಿಯಿಂದ ಹೇಳಿದಂತಾಯಿತು. ಇನ್ನು ತರ್ಕದ ದೃಷ್ಟಿಯಿಂದ ನೋಡೋಣ ದೇವನ ಅನೇಕ ಹೆಸರುಗಳಲ್ಲಿ 'ಕಮಲನಾಭ' ಎಂಬುದೊಂದಿದೆ. ಈ ಹೆಸರನ್ನು ಕೇಳಿದಾಗೆಲ್ಲ ನನಗೆ ನಗುವೂ ಬರುತ್ತಿದ್ದಿತು; ಸಂಶಯವೂ ಉಂಟಾಗುತ್ತಿದ್ದಿತು. ನಾಭಿಯಲ್ಲಿ ಕಮಲವನ್ನು ಇಟ್ಟುಕೊಳ್ಳುವುದು ಇದೆಂತಹ ಅಲಂಕಾರ? ಈ ದೇವನು ಕ್ಷೀರಸಾಗರದಲ್ಲಿ ಮುಖ ಮೇಲು ಮಾಡಿ ಮಲಗಿರುವನೇನೋ ನಿಜ; ಆದರೆ ನಾಭಿಯಲ್ಲಿ ಕಮಲವೆ ಇದ್ದುದು ನಿಜವಾದರೆ ದೇವನು ಅಪರಿಮಿತ ಯುಗಗಳ ವರೆಗೂ ಮುಖವನ್ನು ಮೇಲೆಯೆ ಮಾಡಿಕೊಂಡು ಮಲಗಬೇಕಾಗುವುದಲ್ಲವೆ? ಮಗ್ಗುಲಾಗಿ ಮಲಗಬೇಕೆಂದರೆ ಬಳಿಯಲ್ಲಿ ಕುಳಿತವರನ್ನು ಕೆಣಕುವುದು ಆ ಕಮಲದ ಬಳ್ಳಿ; ಇನ್ನು ಹೇಗೊ ಮಾಡಿ ಒಮ್ಮೆಲೆ ಹೊಟ್ಟೆಯ ಮೇಲೆ ಮಲಗಬೇಕೆಂದರೆ ನೆಲಬಿಟ್ಟು, ಹವೆಯಲ್ಲಿ, ಕಮಲದ ಬಳ್ಳಿಯ ಮೇಲೆ ದೇಹದ ಸರಿತೂಕ (balance) ವನ್ನಿಟ್ಟು ಮಲಗಬೇಕು! ಪಾಪ! ದೇವನಾದರೇನು? ತನಗೂ ಮುಂದಿಗೂ ಎಡಚಾಗುವಂತೆ ಕಮಲದ ಬಳ್ಳಿಯನ್ನು ಮೈಯಲ್ಲಿ ನೆಡಿಸಿಕೊಳ್ಳುವಷ್ಟು ಮರುಳನೆ? ಆದುದರಿಂದ 'ಕಮಲನಾಭ' ಎಂಬುದು ದೇವನು ಅಲಂಕರಿಸುವ ವರ್ಣನೆಯಲ್ಲ, ಅಲಂಕಾರದಿಂದ ದೇವನ ವರ್ಣನೆ ಇರಬಹುದು ಎಂಬ ಕಲ್ಪನೆ ತೋಚಿತು, ಆಗ ವಿಚಾರ ಮಾಡಲಾಗಿ ಒಂದು ವಿಷಯದಲ್ಲಿ ಅದೆಲ್ಲವೂ ಸರಿಹೋಯಿತು. ಕಮಲವಿರುವುದು ಕೆಸರಿನಲ್ಲಿ, ಕೆಸರಿರುವುದು ಭತ್ತದ ಗದ್ದೆಯಲ್ಲಿ, ದೋಸೆ ಪರಮಾತ್ಮನ ವ್ಯಕ್ತಸ್ವರೂಪವೆಂದರೆ, ಭತ್ತವು ಅವ್ಯಕ್ತ ಸ್ವರೂಪ. ಅಂತೂ ಭತ್ತದ ಮಧ್ಯದಲ್ಲಿದ್ದ ಕಮಲವು ದೋಸೆಯ ಮಧ್ಯದಲ್ಲಿದೆ ಎಂದು ಹೇಳಿದರೆ ತಪ್ಪಾಗುವುದಿಲ್ಲ—ಅರ್ಥಾತ್ ದೇವನ ನಾಭಿಯಲ್ಲಿದೆ ಎಂದು ಹೇಳಿದಂತಾಯಿತು.

ತತ್ವಜ್ಞಾನ—ತರ್ಕಗಳಲ್ಲಿ ಆಸಕ್ತಿಯಿಲ್ಲದವರಿಗೆ ವ್ಯವಹಾರದ ದೃಷ್ಟಿಯಿಂದ ಹೇಳಬಹುದು. ಬೆಳಗಿನಲ್ಲೆದ್ದು 'ಧಿಯೋಯೋನಃ ಪ್ರಚೋದಯಾತ್' ಎಂದು ಹೇಳುತ್ತೇವೆ. ಆದರೆ ನಮ್ಮ ಬುದ್ಧಿಗೆ ಬೆಳಗಿನಲ್ಲಿ ಎದ್ದಾಕ್ಷಣ ಪ್ರಚೋದನೆ (ಪ್ರೇರಣೆ) ಯನ್ನು ಕೊಡುವವರು ಯಾರು? ಬಿಸಿಬಿಸಿ—ದೋಸೆ! ಆದರಂತೆಯೆ ಮೈಸೂರಲ್ಲಿ, ಕರ್ನಾಟಕದಲ್ಲಷ್ಟೆ ಅಲ್ಲದೆ ಇಡಿಯ ಭರತಖಂಡದಲ್ಲಿ,

ಲಂಡನ್ ವೀರಸ್ವಾಮಿಯ ಉಪಹಾರಗೃಹದಲ್ಲಿ, ನೋಡಿನೋಡಿದಲ್ಲಿ ಎಲ್ಲ ಕಡೆಯಲ್ಲಿ, ಜಗತ್ತನ್ನು ತುಂಬಿಕೊಂಡಿದೆ ದೋಸೆ.... ಸರ್ವಾಂತರ್ಯಾಮಿಯಾದ ಈ ದೋಸೆಯು 'ಅತ್ಯತಿಷ್ಠತ್ ದಶಾಂಗುಲಂ'—ಹತ್ತು ಬೆರಳುಗಳನ್ನಿಟ್ಟರೆ ಅವುಗಳಿಗಿಂತ ದೊಡ್ಡದೆಂದು ವೇದದಲ್ಲಿ ಹೊಗಳಲ್ಪಟ್ಟಿದೆಯೆಂಬುದನ್ನು ಇನ್ನೊಮ್ಮೆ ಲಕ್ಷ್ಯದಲ್ಲಿಟ್ಟುಕೊಂಡರೆ ದೋಸೆಗೆ ದೂಷಣೆ ಕೊಡುವುದು ಶುದ್ಧ ತಪ್ಪು, ಅನ್ಯಾಯ ಎಂದು ತಾನಾಗಿಯೆ ಹೊಳೆಯುವುದು.

ಇನ್ನು ದೋಸೆಯನ್ನು ತಿಂದವನ ವಿಷಯ: ದೋಸೆಯು ದೇವನೆಂದು ಒಪ್ಪಿಕೊಂಡ ಮೇಲೆ ಅದನ್ನು ತಿಂದು ಸತ್ತ ವ್ಯಕ್ತಿಗೆ ಕೂಡ ಯಾರೂ ದೂಷಣೆ ಕೊಡಲಾಗದು. ದೇವನಿಗಾಗಿ ದೇಹವನ್ನಿಡುವುದೆಂದರೆ ಅದೆಂತಹ ಪುಣ್ಯದ ಕೆಲಸ! ಸಾವಿರಾರು ವರ್ಷಗಳ ವರೆಗೆ ಆಕಾಶಕ್ಕೆ ತಲೆಗೂದಲನ್ನು ಕಟ್ಟಿ, ಬಿಸಿಲ್ಗುದುರೆಯ ಮೇಲೆ ಕಾಲನ್ನಿಟ್ಟು ದೇವನಿಗಾಗಿ ತಪಸ್ಸು ಮಾಡಿದ ಋಷಿಗಳಿಗಿಂತ ಈ ವ್ಯಕ್ತಿಯು ಶ್ರೇಷ್ಠ ಎಂದು ಹೇಳಬಹುದು. ತಮ್ಮ ದೇಹದಲ್ಲಿಯೆ ದೇವನಿದ್ದಾನೆಂಬುದನ್ನು ಮರೆತು ಅವರು ದೇಹವನ್ನು ದುಡಿಸುತ್ತಿದ್ದರು; ಆದರೆ ಈ ವ್ಯಕ್ತಿಯು ಒಳಗಿನ ದೇವನನ್ನು ಅರಿತು, ಹೊರಗಿನ ದೇವನನ್ನು ಹುಡುಕಿ, ಐಕ್ಯದಲ್ಲಿ ಲಯಹೊಂದಿದನು. ಇದಲ್ಲದೆ ಸಾವಿರಾರು ವರ್ಷ ತಪಸ್ಸು ಮಾಡುವವರು ಬುದ್ಧಿ ಇಲ್ಲದ ವಿದ್ಯಾರ್ಥಿಗಳಂತೆ; ಅದೇ ಪರೀಕ್ಷೆಯಲ್ಲಿ ಅನೇಕ ಸಲ ಪೆಟ್ಟು ತಿಂದು ಕಾಲವನ್ನು ಹಾಳುಮಾಡುವವರು. ಆದರೆ ಈ ನಮ್ಮ ದೋಸೆಯ ವೀರನು ಚುರುಕಾದ ವಿದ್ಯಾರ್ಥಿಯಂತೆ. ಹಿಡಿದುದೊಂದೇ ತಡ, ಪರೀಕ್ಷೆಯಲ್ಲಿ ಯಶಸ್ಸನ್ನೆ ದೊರಕಿಸಿದನು.

ಸೂಕ್ಷ್ಮವಾಗಿ ವಿಚಾರಮಾಡಿ ನೋಡಿದರೆ ಈ ಪಾಲಘಾಟದ ಪ್ರತಾಪಿಯನ್ನು ನಾವು ಎಷ್ಟು ಹೊಗಳಿದರೂ ಸಾಲದು. ಇಂದು ಹಿಂದುಸ್ತಾನದ ಜನರಿಗೆ ಒಂದು ಸುಖದ ಮಾದರಿಯನ್ನು ಅವನು ಹಾಕಿಕೊಟ್ಟಿದ್ದಾನೆ. ಯಾವ ದೇಶದಲ್ಲಿ ಸತ್ತರೂ ಹಿಂದುಸ್ತಾನದಲ್ಲಿ ಸಾಯಬಾರದು ಎನ್ನುವಂತಹ ಸ್ಥಿತಿ ನಮ್ಮದು. ಪ್ಲೇಗ, ಕಾಲರಾ, ಮುಂತಾದ ಅಸಹ್ಯ ರೋಗಗಳ ತವರ್ಮನೆ ನಮ್ಮ ದೇಶ; ಈ ಅಸಹ್ಯ ರೋಗಗಳಿಂದ ಬರುವ ಮರಣವೂ ಅಸಹ್ಯವಾದುದು, ಹೇಸಿಯಾದುದು, ಕ್ರೂರವಾದುದು. ಆದರಂತೆಯೆ ನಮ್ಮದೆ ಆದ ಒಂದು

ಕ್ಷಯರೋಗವಿದೆ. ಅದೆಂದರೆ ಬಡತನ. ಈ ರೋಗದಿಂದ ಅನೇಕ ವರ್ಷಗಳ ವರೆಗೆ ಬಳಲಿ ಬಳಲಿ, ಸವೆದು ಸವೆದು, ಕೊನೆಗೆ ಕೊಳೆತುಹೋಗಬೇಕಾಗುವುದು. ಇದೂ ಕ್ರೂರವಾದ ಮರಣವೆ. ಇದಲ್ಲದೆ ಇನ್ನಾವ ರೋಗದಿಂದ ಸತ್ತರೂ ಜಾತಿಯ ತೊಡಕು-ತೊಂದರೆಗಳು ಇದ್ದೇ ಇವೆ. ಆದರೆ ದೋಸೆಯ ಭಕ್ತರು ಜಾತಿಯನ್ನು ಮೀರಿದವರು. ದೋಸೆಗೆ ಜಾತಿ ಎಂಬುದಿಲ್ಲ, ಅದನ್ನು ತಿನ್ನುವವನೂ ಇಂತಹ ಜಾತಿಯವನೆ ಇರಬೇಕೆಂದು ನಿಯಮವಿಲ್ಲ ಇಷ್ಟೇಕೆ—ದೋಸೆಯ ಸೇವನದಿಂದ ಹೊಸತೊಂದು ವಿಶ್ವಬಾಂಧವ್ಯದ ಜಾತಿಯೆ ನಿರ್ಮಾಣವಾಗುತ್ತಲಿದೆ ಎಂದು ಹೇಳಬಹುದು. ಇರಲಿ—ಅಂತೂ ದೋಸೆಯು ಭಕ್ತನಿಗೆ ಇರುವಾಗ ಇಲ್ಲವೆ ಸತ್ತಮೇಲೆ ಜಾತಿಯ ತೊಡಕು-ತೊಂದರೆಗಳು ಇಲ್ಲವೆಂದಂತಾಯಿತು. ಇಂತಹ ದೋಸೆಯ ಸೇವೆಯಲ್ಲಿ ತನ್ಮಯನಾದಾಗ ಜೀವಹೋಗಬೇಕೆಂದರೆ ಪೂರ್ವಕೃತ ಪುಣ್ಯವಿರಲೇಬೇಕಲ್ಲವೆ? ಇದಲ್ಲದೆ ಈ ಮೊದಲು ಹೇಳಿದ ರೋಗಗಳಿಂದ ಬಳಲುವವರಿಗೆ ಈ ದೋಸೆಯ ದಾಸನು ಸುಲಭವಾದ, ಸಂತೋಷಕರವಾದ ಮೋಕ್ಷದ ದಾರಿಯನ್ನು ತೋರಿಸಿಕೊಟ್ಟನೆಂದು ಹೇಳಬಹುದಲ್ಲವೆ? ಬೆಳಗಿನ ತುಂಬುಗಳೆಯ ಮುಖ, ಮೇಲೆ ದೋಸೆಯ ದರ್ಶನದಿಂದ ಹಿಗ್ಗಿದ ಮುಖ, ಎಡಗೈ ಮೇಲೆ ದೇಹಭಾರವನ್ನಿಟ್ಟು ಬಲಗೈಯನ್ನು ಬಾಯಿಗೆತ್ತಿದ್ದರಿಂದ ಏಳುತ್ತಿರುವನೇನೋ ಎಂಬ ವೈಬಳಕು, ಕೈಕೊಂಡ ಸಾಹಸದ ಓಜಸ್ಸು ಸೂಸುತ್ತಿದೆ, ನೂರಾರು ಜನರು ಸುತ್ತಲೂ ನಗುತ್ತ ನಿಂತಿದ್ದಾರೆ. ಇಂತಹ ಸ್ಥಿತಿಯಲ್ಲಿ ಸಾಯುವುದು ನಾವು ಇರುವುದಕ್ಕಿಂತಲೂ ಸಾವಿರ ಪಾಲು ಸುಖವಲ್ಲವೆ?

ಇಷ್ಟಕ್ಕೆ ಯಾರ ಮನಸ್ಸೂ ಒಲಿಯದಿದ್ದರೆ ಕೊನೆಯ ಕಾರಣವನ್ನು ಹೇಳುವೆ. ದೋಸೆಯನ್ನು ತಿನ್ನುವಾಗ ಸಾಯುವುದು ಸ್ವರ್ಗಸುಖ ಭಾರತೀಯರಿಗೆ, ಯಾಕೆಂದರೆ ಮುಂದೆ ದೋಸೆಯ ಬಂದಾಣಿ ಕೊಡುವ ತೊಂದರೆ ಇಲ್ಲ.

ಅಕ್ಟೋಬರ ೧೯೩೪.

# ನಮ್ಮೂರ ಮ್ಯುನಿಸಿಪಾಲಿಟಿ

'ನಮ್ಮೂರ ಮ್ಯುನಿಸಿಪಾಲಿಟಿ ಎಂಬ ಹೆಮ್ಮೆ ಯಾಕೆ? ನಮ್ಮೂರಲ್ಲಿ ಇಲ್ಲವೆ? ಇನ್ನೂ ಅನೇಕಕಡೆ ಇಲ್ಲವೆ?' ಎಂದು ಪ್ರಾರಂಭಕ್ಕೆಯೆ ಕುಠಾರವನ್ನೆತ್ತಿ ನನ್ನನ್ನು ಕೆಣಕಬೇಡಿರಿ. ಹೀಗೆ ಪ್ರಥಮವಿಘ್ನವಾದರೆ ನಾನು ಹೇಳಬೇಕೆಂದಿದ್ದ ನಮ್ಮೂರ ಇನ್ನೂ ಅನೇಕ ಮೋಜುಗಳನ್ನು ಹೇಳಲಿಕ್ಕಿಲ್ಲ! ಇದಲ್ಲದೆ 'ನಮ್ಮೂರ' ಎಂಬಲ್ಲಿ ನನಗೆ ಹೆಮ್ಮೆ ಇಲ್ಲ. ನಿಮ್ಮೂರಲ್ಲೂ ಮ್ಯುನಿಸಿಪಾಲಿಟಿ ಇದೆ, ನಮ್ಮ ದೇಶದ ಅನೇಕ ಊರುಗಳಲ್ಲಿ ಮ್ಯುನಿಸಿಪಾಲಿಟಿ ಇವೆ; ಅದೆಲ್ಲ ನನಗೆ ಗೊತ್ತು. ನಮ್ಮದೂ ನಿಮ್ಮದೂ ನಮ್ಮೆಲ್ಲರದೂ ಒಂದೇ ಕರ್ಮಭೂಮಿ ಅಲ್ಲವೆ? ಆದುದರಿಂದ ನಮ್ಮೆಲ್ಲರ ಕರ್ಮವೂ ಒಂದೇ ಅತಏವ ನಾವೆಲ್ಲರೂ ಅನುಭೋಗಿಸುವುದು ಒಂದೇ. ಹೀಗಿರುವಾಗ 'ನಮ್ಮೂರ' ಎಂಬಲ್ಲಿ ನನಗೆ ಹೆಮ್ಮೆ ಹೇಗೆ ಇದ್ದೀತು? ಆದರೆ 'ಮ್ಯುನಿಸಿ-ಪಾಲಿಟಿ' ಎಂಬ ಮಾತಿಗಾಗಿ ಹೆಮ್ಮೆ ಇದೆ, ಅದನ್ನು ಯಾರು ಏನು ಹೇಳಿದರೂ ಬಿಡುವಂತಿಲ್ಲ ನಾನು ಇಲ್ಲಿ ಬರೆಯುವುದನ್ನು ಓದಿರಿ, ಆ ಮೇಲೆ ನನಗೆ ಯಾಕೆ ಇಂತಹ ಹೆಮ್ಮೆ ಎಂಬುದು ತಿಳಿಯುವುದು. ನಿಮಗೆ ಸಮಾಧಾನವಾಗದಿದ್ದರೆ ನಾಲ್ಕಾರು ಪಂಚಜನರನ್ನು ಕೇಳಿರಿ.

**ಮೊದಲನೆಯದು :**— ಇತ್ತಿತ್ತಲಾಗಿ ಸ್ಥಾನಿಕ ಸಂಸ್ಥೆಗಳಲ್ಲಿ ಒಂದು ಸಿಡುಗು ಹಬ್ಬಿದೆ, ಗೊತ್ತಿದೆಯೆ ತಮಗೆ? ಅದಕ್ಕೆ ಇಂಗ್ಲಿಷಿನಲ್ಲಿ supercession ಇಲ್ಲವೆ suspension ಎನ್ನುವರು; ಕನ್ನಡದಲ್ಲಿ—ಅಥವಾ ನಮಗೂ ನಿಮಗೂ ತಿಳಿಯುವ ಮಾತಿನಲ್ಲಿ ಹೇಳುವುದಾದರೆ 'ಉಚ್ಚಾಟನೆ'—ಎಂದು. ಎಂತೆಂತಹ ಮ್ಯುನಿಸಿಪಾಲಟಿಗಳು ಈ ಸಿಡುಗಿಗೆ ತುತ್ತಾಗಿವೆ! ಆದರೆ ನಮ್ಮದು ಇಲ್ಲ? ಇಲ್ಲ! ಇಲ್ಲ. ಹೀಗಿರುವಾಗ ನನ್ನಂತಹರು ಯಾಕೆ ಹೆಮ್ಮೆ ಪಡಬಾರದು? ಈಗ ಕೇಳುವಿರಲ್ಲವೆ ನಮ್ಮ ಮ್ಯು. ಪಾ. ಟಿಯು ಹೇಗೆ ಸಿಡುಗಿನಿಂದ ಪಾರಾಯಿತೆಂದು? ಹೇಳುವೆ, ಚಿತ್ತೈಸಿರಿ. ಪ್ಲೇಗ ಪ್ರತಿಬಂಧಕ ಗುಳಿಗೆಗಳನ್ನು ನೋಡಿರುವಿರಾ? ಆ ತತ್ತ್ವದ ಒಂದು ಔಷಧಿ ಇದೆ ನಮ್ಮ ನಗರಸಭೆಯಲ್ಲಿ ಅಥವಾ ಹೆಚ್ಚೇನು? ನಮ್ಮ ಮ್ಯುನಿಸಿಪಾಲಿಟಿಯೆ ಪ್ಲೇಗ ಪ್ರತಿಬಂಧಕ ಗುಳಿಗೆಯಂತಿದೆ, ಅಷ್ಟೊಂದು ಸಹಿಸಲಸಾಧ್ಯವಾದ ನಾತ ಇಡುಗಿದೆ, ಅದಕಾಗಿ

ಬೇಕಾದ್ದನ್ನು ಸಹಿಸಬಲ್ಲ ಮನುಷ್ಯನು ಕೂಡ ಅದರ ಹತ್ತಿರ ಬಾರದಿದ್ದಾಗ ಪಿಡುಗಿನ ಶಕ್ತಿ ಎಲ್ಲಿಯದು? ನಮ್ಮ ಮ್ಯುನಿಸಿಪಾಲಟಿಯು ಇಂತಹ ಆ್ಯಂಟಿ-ಸೆಪ್ಟಿಕ್ ಸಾತವನ್ನು ಹೇಗೆ ಮೈಗೂಡಿಸಿಕೊಂಡಿತೆಂಬುದು ಇನ್ನು ಕೇಳಬೇಕಾದ ಪ್ರಶ್ನೆ. ಅದಕ್ಕೆ ಉತ್ತರವಾಗಿ

**ಎರಡನೆಯದು**:— ಸಾಮಾನ್ಯವಾಗಿ ಮ್ಯುನಿಸಿಪಾಲಿಟಿಗಳು ನಾಗರಿಕರ ಮತ್ತು ನಗರದ ದೃಷ್ಟಿಯಿಂದ ಕೆಲಸವನ್ನು ಕೈಕೊಳ್ಳಲು ಯತ್ನಿಸುವುವು. ಇದೇ ವಿಕ್ಷ ಮ್ಯುನಿಸಿಪಾಲಿಟಿಗಳು ಮಾಡುವ ದೊಡ್ಡ ತಪ್ಪು. ನಗರದ ತುಂಬ ಕಾರಭಾರ ಮಾಡಿದರೆ ತಪ್ಪೀತೆ ಪಿಡುಗಿನ ಬಾಧೆ? ಈ ಮಾತನ್ನು ನಮ್ಮ ಮ್ಯುನಿಸಿಪಾಲಿಟಿಯು ತರ್ಕದಿಂದ ತಿಳಿದುಕೊಂಡಿದೆ, ಧೈರ್ಯದಿಂದ ಒಪ್ಪಿಕೊಂಡಿದೆ. ಅದಕಾಗಿ ಹೊರಗಿನಿಂದ ಯಾವ ರೋಗದ ಸಂಪರ್ಕವೂ ನಮ್ಮ ಮ್ಯು. ಪಾ. ಟಿಗೆ ತಗಲುವ ಹೆದರಿಕೆಯೆ ಇಲ್ಲ ಅಥವಾ ಈ ಮಾತನ್ನು ಇನ್ನಿಷ್ಟು ಬಿಡಿಸಿ ಹೇಳುವೆ. ಮ್ಯುನಿಸಿಪಾಲಿಟಿಗೆ ಮೂಲ ಚುನಾವಣೆ. ಈ ಚುನಾವಣೆಯ ಕಾಲಕ್ಕೆ ಹುರಿಯಾಳುಗಳು 'ನಾನು ಹಾಗೆ ಮಾಡುವೆ, ಹೀಗೆ ಮಾಡುವೆ, ಅದಕಾಗಿ ನನಗೆ ಮತವನ್ನು ಕೊಡಿರಿ' ಎಂದು ಹೇಳುವ ವಾಡಿಕೆ. ಮುಂದೆ ಚುನಾಯಿಸಿದರೆ ಹಾಗೂ ಹೀಗೂ ಮಾಡಲೇಬೇಕಾಗಿ, ಪಿಡುಗಿಗೆ ಆಹುತಿಯಾಗುವ ಪ್ರಸಂಗ ಬರುವುದು ಅದಕಾಗಿ ನಮ್ಮ ಹುರಿಯಾಳುಗಳು ಮೊದಲಿನಿಂದ ದಕ್ಷತೆಯನ್ನು ವಹಿಸುವರು. ಹೇಗೆಂಬುದಕ್ಕೆ ಅವರು ಮತವನ್ನು ಬೇಡುವಾಗ ಹೇಳುವ ಮಾತುಗಳ ಮಾದರಿಯನ್ನು ಕೇಳಿರಿ 'ನಾನು ಇಂತಹ ಜಾತಿಯವನಿರುವೆ, ಅದಕಾಗಿ ನನಗೆ ಮತವನ್ನು ಕೊಡಿರಿ' ಇಲ್ಲವೆ 'ನನ್ನಲ್ಲಿ ನೂರು ರೂಪಾಯಿಯ ಕರೆನ್ಸಿ ನೋಟು ಇದೆ, ಅದಕ್ಕೆ ಚಿಲ್ಲರು ಬೇಕಾಗಿದೆ, ಆದ್ದರಿಂದ ನನಗೆ ನಿಮ್ಮ ಮತವನ್ನು ಕೊಡಿರಿ,' ಅಥವಾ 'ನಾನು ನಿಮ್ಮ ಮನೆಯಲ್ಲಿಯ ಶ್ರಾದ್ಧ-ಪಕ್ಷಗಳನ್ನು ನಡೆಸುವೆ, ಅದಕಾಗಿ—' ಮುಂತಾಗಿ. 'ಶ್ರಾದ್ಧಪಕ್ಷಗಳನ್ನು ನಡೆಸುವುದು.' ಎಂಬ ಮಾತಿಗಾಗಿ ನಗಬೇಡಿರಿ. ಯಾಕೆಂದರೆ, ಅದು ಶಕ್ಯವಿದೆ, ಸುಲಭವಿದೆ, ಇಂದಿನ ಜೀವನದಲ್ಲಿ ಅನುಕೂಲವಿದೆ, ಮತ್ತು ನಮ್ಮವರು ಅವನ್ನು ಮಾಡಿಯೂ ತೋರಿಸಿದ್ದಾರೆ. ಶ್ರಾದ್ಧಪಕ್ಷಗಳ ರಹಸ್ಯವೇನು? ಸತ್ತವರನ್ನು ಮರ್ತ್ಯಭೂಮಿಗೆ ಆಹ್ವಾನಿಸುವುದು. ಅದನ್ನು

ನಮಗಾಗಿ ನಮ್ಮ ಹುರಿಯಾಳುಗಳೇ ಮಾಡುವರು ದೃಷ್ಟಾಂತಕ್ಕೆ, ಎಷ್ಟೋ ನಮ್ಮ ಹುರಿಯಾಳುಗಳು ಸತ್ತವರಿಂದಲೆ ಬಹುಮತವನ್ನು ಪಡೆದು ಆರಿಸಿ ಬರುವರು. ಇದ್ದವರಿಗಿಂತ ಸತ್ತವರ ಸಂಖ್ಯೆಯೇ ಯಾವಾಗಲೂ ದೊಡ್ಡದಿರುವುದರಿಂದ ಬಹುಮತವನ್ನು ದೊರಕಿಸಲು ಇದು ರಾಮಬಾಣ ಎಂದು ಹೇಳಬಹುದು. 'ಸತ್ತವರಿಗೆ ಮರಳಿ ಭೂಮಿಗೆ ಬಂದು ಮತಕೊಡುವ ಉತ್ಸಾಹ ಯಾಕೆ?' ಎನಬೇಡಿರಿ. ಪ್ರತ್ಯಕ್ಷ ನರಕದ ಅನುಭವವನ್ನು ಕಂಡ ಅವರಿಗೆ ಮ್ಯುನಿಸಿಪಾಲಿಟಿಗಾಗಿ ಮತಕೊಡಲು ಉತ್ಸಾಹವಿರಲಿ, ಇಲ್ಲದಿರಲಿ, ಅಧಿಕಾರವಿದೆ, ಕರ್ತವ್ಯವಾಗಿದೆ ಎಂದು ಹೇಳಬಹುದು. ಆದರೆ ಹೀಗೆ ಮಾಡುವುದು ಶಾಸನದ ವಿರುದ್ಧವಲ್ಲವೆ—ಎಂದೂ ದನಿ ಎಳೆಯಬೇಡಿರಿ. ಯಾಕೆಂದರೆ ಶಾಸನಭಂಗದಲ್ಲಿ ನುರಿತ ದೇಶಭಕ್ತರು ನಮ್ಮ ಮುಂದಾಳುಗಳು; ಶಾಸನಭಂಗವು ದೇಶಭಕ್ತಿಯ ಮೊದಲ ಸೂತ್ರವು. ಹಾಗೆ ಕೇಳಿದರೆ ಇಂತಹ ಸಂಶಯಗಳಿಗೆ ನಮ್ಮೂರಿನವರ ಹೃದಯದಲ್ಲಿ ಆಸ್ಪದವೆ ಇಲ್ಲ. ಅದಕ್ಕೆ ಕಾರಣವನು ಹೇಳುವುದಾದರೆ

**ಮೂರನೆಯದು** :— ನಮ್ಮೂರಿನವರಿಗೆ ಹೃದಯವು ಇಲ್ಲ. ಇದನ್ನು ಕೇಳಿ ಗಾಬರಿಗೊಂಡು ಎದೆಯನ್ನು ಬಡಿದುಕೊಳ್ಳಬೇಡಿರಿ. ಹೃದಯವಿಲ್ಲ, ಯಾಕೆಂದರೆ ಹೃದಯದ ಅಗತ್ಯವೆ ನಮಗಿಲ್ಲ. ದೇಹದೊಳಗೆ ರಕ್ತದ ಅಭಿಸ್ರವಣವನ್ನು ಮಾಡುವುದು ಹೃದಯದ ಕೆಲಸ, ಅದಕಾಗಿ ಹೃದಯದ ಅಗತ್ಯ. ಆದರೆ ರಕ್ತವೆ ಇಲ್ಲದಲ್ಲಿ ಹೃದಯದ ಕೆಲಸವೇನಿದೆ? ನಮ್ಮೂರಿನವರಿಗೆ ರಕ್ತವಿಲ್ಲ. ಅಲ್ಲಲ್ಲಿ, ಯಾರಿಗಾದರೊಬ್ಬರಿಗೆ ಇದ್ದರೆ ಅದನ್ನು ನಾವು ಸಡೆಯಗೊಡುವುದಿಲ್ಲ. ಪಾಪ! ಕಣ್ಣಿಗೆ ಕಾಣಿಸದಂತೆ ಸೂಕ್ಷ್ಮಜೀವಿಗಳಾದ ಸೊಳ್ಳೆ (mosquito) ಗಳು ಬಾಯಿಬಿಟ್ಟು ಸುಳಿವಾಗ, ನಮ್ಮ ರಕ್ತವನ್ನು ಒಳಗಿಂದೊಳಗೆ ಬಚ್ಚಿಟ್ಟುಕೊಳ್ಳುವಷ್ಟು ನಿರ್ದಯರೆ ನಾವು? ಸುಳ್ಳೆನಿಸಿದರೆ ನಮ್ಮೂರಿಗೆ ಬಂದು ನೋಡಿರಿ. ಹಗಲು-ರಾತ್ರಿ ಎಂಬ ಭೇದವಿಲ್ಲದೆ; ಆಶ್ರಮದ ಪಶು-ಪಕ್ಷಿಗಳಂತೆ ನಿರ್ಭಯದಿಂದ ಸ್ನೇಹದಿಂದ ನಮ್ಮ ಸುತ್ತಲೂ ಸುಳಿಯುತ್ತಿರುವುವು ಸೊಳ್ಳೆಗಳು. ವಸಂತ ಕಾಲದ ಕೋಕಿಲ-ಗಾಯನಕ್ಕಿಂತ ಇಂಪಾದ ಸೊಳ್ಳೆಸಂಗೀತಕ್ಕೆ ನೀವು ಮೈಮರೆತು ಕುಣಿದಾಡುವಿರಿ, ಆ ಗಾನಕ್ಕೆ ತಾಳಹಿಡಿಯಲು ಚಪ್ಪಾಳೆ

ತಟ್ಟುವಿರಿ. ನಾವು ಸ್ವಾರ್ಥಿಗಳಾಗಿ ನಮ್ಮ ರಕ್ತವನ್ನು ನಮ್ಮ ಮೈಯಲ್ಲಿಯೆ ಇಟ್ಟುಕೊಂಡಿದ್ದರೆ, ಈ ಅಲ್ಪಜೀವಿಗಳು ಇಷ್ಟೊಂದು ಆನಂದದಿಂದ ಇರ ಬಹುದಾಗಿತ್ತೆ ? ಇನ್ನು 'ಈ ಮಾತಿಗೆ ನಮ್ಮ ಮ್ಯುನಿಸಿಪಾಲಿಟಿಯ ಸಂಬಂಧ ವೇನು ?' ಎನಬೇಡಿರಿ. ಯಾಕೆಂದರೆ ಮನೆಗಳನ್ನು ಕಟ್ಟಿಸುವಾಗ, ಬೀದಿ ಗಳನ್ನು ಹಾಕಿಸುವಾಗ ಸೊಳ್ಳೆಗಳು ನಿರಾಶ್ರಿತವಾಗದಂತೆ ನೋಡಬೇಕು ಎಂಬ ಕರಾರಿನ ಮೇಲೆಯೆ ಮ್ಯುನಿಸಿಪಾಲಿಟಿಯು 'ಪರವಾನಿಗೆ' ಯನ್ನು ಕೊಡುವುದು. ಉದಾಹರಣಾರ್ಥವಾಗಿ : ಹೊಲಸು ನೀರು ಹರಿದು ಮತ್ತೆಲ್ಲೂ ಹೋಗಕೂಡದು ಎಂಬ ನಿಯಮವಿದೆ ನಮ್ಮಲ್ಲಿ. ಅದು ಸಾರ್ಥಕವಾಗಿದೆ. ಯಾಕೆಂದರೆ, ಹೊಲಸು ನೀರು ಹರಿದು ಎತ್ತಲೊ ಹೋದರೆ ಸೊಳ್ಳೆಗಳ ಗತಿ ಏನು? ಅದಕಾಗಿ ಪ್ರತಿಯೊಂದು ಮನೆಯವರೂ ತಮ್ಮ ನೀರು ತಮ್ಮಲ್ಲಿಯೆ ನಿಲ್ಲುವಂತೆ ಮಾಡುವರು. ಒಮ್ಮೊಮ್ಮೆ ನೆರೆಯವನು ನಿರ್ದಯನೆಂದು ಕಂಡುಬಂದರೆ, ಉದಾರ ಹೃದಯದಿಂದ ಅವನ ಮನೆಮುಗ್ಗಲಲ್ಲೂ ಸೊಳ್ಳೆಗಳ ನಿವಾಸಸ್ಥಾನವಾಗುವಂತೆ ಏರ್ಪಾಡು ಮಾಡುವರು. ಇದು ನಮ್ಮ ಊರಲ್ಲಿ ಶಕ್ಯವಿದೆ. ಕಾರಣವೇನೆಂದರೆ

**ನಾಲ್ಕನೆಯದು :—** ನಮ್ಮೂರ ಜನಜೀವಿತದಲ್ಲಿ ನಿಜವಾಗಿ ಡೆಮಾರಕ್ಕಸಿಯ (ಇದಕ್ಕೆ ಇಂಗ್ಲಿಷಿನಲ್ಲಿ ಡೆಮಾಕ್ರಸಿ, ಕನ್ನಡದಲ್ಲಿ ಪ್ರಜಾ ಸತ್ತಾತ್ಮಕ–ಎಂದರೆ ಸತ್ತ ಪ್ರಜೆಗಳ ಮತದಿಂದ ನಡೆಯುವ ಪದ್ಧತಿ– ಎನ್ನುವರು) ಪ್ರಭಾವವಿದೆ. ಹಗಲೆಲ್ಲ ಕ್ಷೌರಧಂದೆಯಲ್ಲಿ ತೊಡಗಿದವನನ್ನು ಸಾಯಂಕಾಲ ನೀವು ನಗರಸಭೆಯ ಅಧಿವೇಶನದ ಸದಸ್ಯನಾದುದನ್ನು ನೋಡಬಹುದು. ಕ್ಷೌರಿಕನಿಗೂ ನಗರಸಭೆಯ ಸದಸ್ಯತ್ವಕ್ಕೂ ವ್ಯತ್ಯಾಸವಿದೆ ಎಂಬ ಉಚ್ಚ–ನೀಚ ಭಾವದ ಉದ್ಧಾಮತನ ನಮ್ಮಲ್ಲಿಲ್ಲ. ಅದರಂತೆಯೆ ಬೆಳಗಿನಿಂದ ರಾತ್ರಿಯ ವರೆಗೆ ಕುದುರೆಯ ಲಗಾಮನ್ನು ಹಿಡಿದು ಟಾಂಗಾ ನಡೆಯಿಸುವವನು 'ರಾತ್ರಿ ಆಡಳಿತೆಯ ಸೂತ್ರವನ್ನು ಹಿಡಿದು ನಗರಸಭೆ ಯನ್ನು ನಡೆಸಿದರೆ ನಮಗೆ ಸೋಜಿಗವಿಲ್ಲ. ಟಾಂಗೆಗೆ ಹೂಡಿದ ಕುದುರೆ-ಗಳಂತಹ ಸುಸಂಸ್ಕೃತ ಪಶುಗಳಿಗೂ ನಾಗರಿಕರಿಗೂ ಭೇದವಿದೆ ಎಂಬ ಮಿಥ್ಯಾ ಹಂಕಾರ ನಮಗಿಲ್ಲ. ಇದಲ್ಲವೆ ನಿಜವಾದ ಡೆಮಾರಕ್ಕಸಿ. ಶುನಿ ಚೈವ ಶ್ವಪಾಕೇ ಚ ಸಮಂ ಮ್ಯುನಿಸಿಪಾಲಿಟಿ! ಈ ಸಮತ್ವಬುದ್ಧಿಗಾಗಿಯೆ

ಮೆಂಬರಿಕೆ ಯಾರಿಗೆ ದೊರೆತರೂ ನಮಗೆ ಮಹತ್ತ್ವವೆನಿಸುವುದಿಲ್ಲ, ಮತ ವನ್ನು ಯಾರಿಗೆ ಕೊಟ್ಟರೂ ನಮಗೆ ತಪ್ಪೆನಿಸುವುದಿಲ್ಲ. ಯಾಕಂದರೆ ಪ್ರತಿಯೊಬ್ಬ ನಾಗರಿಕನಿಗೆ ತನ್ನ ಕರ್ತವ್ಯದ ಅರಿವು ಸಾಕಷ್ಟಿದೆ. ತನ್ನ ಮನೆಯ ಮುಂದಿನ ಬೀದಿಯನ್ನು ತಾನಾಗಿಯೆ ಗುಡಿಸುವನು ಈ ಸ್ವಾವ ಲಂಬಿತ್ವವನ್ನು ನೆರೆಯುವನಿಗೆ ಕಲಿಸಲು ಆ ಕಸವನ್ನು ಅವನ ಮನೆಯ ಮುಂದೆ ಗುಂಪುಗೂಡಿಸುವನು. ತನ್ನ ದಾರಿಯನ್ನು ತಾನೇ ನೋಡಿಕೊ ಳ್ಳುವನು - ಎಂದರೆ, ಕೆಳಗಿದ್ದ ತಗ್ಗು-ದಿನ್ನೆ-ಕಲ್ಲು-ದೂಳುಗಳನ್ನು ನೋಡಿ ಕೊಂಡು ನಡೆಯುವನು. ತನ್ನ ಬಾವಿಯನ್ನು ತಾನೇ ತೋಡಿಕೊಳ್ಳು ವನು (ಒಮ್ಮೊಮ್ಮೆ ಅದಕ್ಕೆ 'ನೀರನ್ನು ಜಗ್ಗುವುದು—ಸೇದುವುದು' ಎಂದು ಹೇಳುವುದುಂಟು). ಹೀಗೆ ಕೇವಲ ಡೆಮೊಕ್ರಸಿಯ ದೃಷ್ಟಿಯಿಂದಲ್ಲ, ಇನ್ನೂ ಅನೇಕ ದೃಷ್ಟಿಗಳಿಂದ ನಮ್ಮ ಮ್ಯು. ಪಾ. ಟಿಯು ತೀರ ಆಧುನಿಕ ವಾಗಿದೆ. ಉದಾಹರಣೆಗಾಗಿ

**ಐದನೆಯದು** :—ಇಂದಿನ ಜೀವನಕ್ಕೆ ಧಾರ್ಮಿಕ ಇಲ್ಲವೆ ರಾಜ- ಕೀಯ ಕಾರಣಗಳಿಗಿಂತ ಆರ್ಥಿಕ ಕಾರಣಗಳೆ ತಳಹದಿಯಾಗಿವೆ ಎಂದು ಹೇಳುವರಷ್ಟೆ! ಆ ಮಾತಿನ ಸತ್ಯತೆ ನಮ್ಮೂರಿನವರ ಜೀವನದಲ್ಲಿ ಕಂಡುಬರು ವುದು. ನಮ್ಮ ಮ್ಯು. ಪಾ. ಟಿಯ ವ್ಯವಹಾರದಲ್ಲಿ ಕಂಡುಬರುವುದು. ಪ್ರಾರಂಭದ ಚುನಾವಣೆಯಿಂದ ಕೊನೆಯ ಕಮಿಟಿಗಳ ಆಯ್ಕೆ-ಆಡಳಿತಗಳ ವರೆಗೆ ಎಲ್ಲ ವ್ಯವಹಾರವೂ ಆರ್ಥಿಕ ತಳಹದಿಯ ಮೇಲೆ ನಿಂತಿದೆ. ನಮ್ಮ ಹುರಿಯಾಳು ಬೇಕಾದ್ದನ್ನು ಹೇಳಲಿ, ವೋಟ (vote) ನ್ನು ಕೊಡುವಾಗ ನಮ್ಮೂರ ಮತದಾರನು ಮಾತ್ರ ಆರ್ಥಿಕ ಸಮಸ್ಯೆಯ ದೃಷ್ಟಿಯಿಂದಲೆ ಕೊಡುವನು. From each candidate according to his ability to each voter according to his need (ಹುರಿಯಾಳಿನ ಶಕ್ತಿಗನುಸರಿಸಿ, ಮತದಾರನ ಅಗತ್ಯವನ್ನನುಲಕ್ಷಿಸಿ) ಆರ್ಥಿಕ ವಿನಿಯೋಗವನ್ನು ಮಾಡು ವುದು ಡೆಮೊಕ್ರಸಿಯ ಒಂದು ಶ್ರೇಷ್ಠ ತತ್ತ್ವವಲ್ಲವೆ? 'ತಾಮ್ರದ ದುಡ್ಡು ತಾಯಿ-ಮಕ್ಕಳನ್ನು ಕೆಡಿಸಿತು' ಎಂಬುದು ಹಿಂದಿನ ಅಸಂಸ್ಕೃತ ಕಾಲದ ಗಾದೆಯ ಮಾತು; ಇಂದು ಅವೇ ತಾಮ್ರದ ದುಡ್ಡು ಚುನಾವಣೆಯಂತಹ ಸ್ಪರ್ಧೆಯ ಕಾಲದಲ್ಲಿ ಕೂಡ ಜಾತಿಜಾತಿಗಳನ್ನು ಕೂಡಿಸಿದೆ. ಅದಕ್ಕೆಂದೇ

ನಾನು ಪ್ರಾರಂಭದಲ್ಲಿ ಹೇಳಿದೆ, 'ಮ್ಯುನಿಸಿಪಾಲಿಟಿ' ಎಂಬ ಮಾತಿಗಾಗಿ ನನಗೆ ಹೆಮ್ಮೆ ಎಂದು. ಮತ್ತೊಮ್ಮೆ ಹೇಳುವೆ, 'ನಮ್ಮೂರು' ಎಂಬುದಕ್ಕಾಗಿ ನನಗೆ ಏನೂ ಹೆಮ್ಮೆ ಇಲ್ಲ; ಬೇಕಾದರೆ ಇದನ್ನು ಓದಿದ ಮೇಲೂ 'ನಮ್ಮೂ-ರ'ಗೆ ನಿಮ್ಮೂರು ಎಂದುಕೊಂಡರೆ ನನಗೇನೂ ಖೇದವಿಲ್ಲ. ಆದರೆ ಒಂದು ಮಾತನ್ನು ಮಾತ್ರ ನೀವು ಎಂದಿಗೂ ಮರೆಯಲಾಗದು. ಆ ಮಾತು

**ಕೊನೆಯದು :**— ನಮ್ಮ ಹುರಿಯಾಳುಗಳು ದೇಶಭಕ್ತರು, ಸತ್ಯ ಪ್ರಿಯರು, ತತ್ತ್ವಾವೇಶಭರಿತರು; ನಮ್ಮ ಮತದಾರರು ಕೋಶಭುಕ್ತರು, ಸತ್ತಪ್ರಿಯರು, ಹತ್ಯಾವೇಶಭರಿತರು. ಒಟ್ಟಾರೆ, ಇಬ್ಬರೂ ಅತ್ಯಂತ ಸುಶಿಕ್ಷಿ-ತರು. ಇಲ್ಲವಾದರೆ ಹೆಮ್ಮೆ ಪಡುವಂತಹ ವಿಷಯವಾಗುತ್ತಿದ್ದಿತೆ ನಮ್ಮೂರ (ಅರ್ಥಾತ್ ನಿಮ್ಮೂರ) ಮ್ಯುನಿಸಿಪಾಲಿಟಿ ?

ಎಪ್ರಿಲ್ '೪೨

---

# ಕಟ್ (Cut) ಉ ಅರ್ಥಾತ್ ಬಿಕ್ಕಟ್ಟು

'ಅರ್ಥಕ್ಕೆ ವ್ಯತ್ಯಯ ಬರುವಲ್ಲಿ ಎರಡು ಶಬ್ದಗಳ ಸಂಧಿಯನ್ನು ಮಾಡಬಾರದು, ಉದಾಹರಣಾರ್ಥವಾಗಿ ರಾಮನು + ಅಂಥ ಜಾಣನೆ = ರಾಮನಂಥ ಜಾಣನೆ?'—ಎಂದು ವ್ಯಾಕರಣವು ಕೈಯೆತ್ತಿ ಸಾರುತಿದೆ. ಆದರೇನು ? ವಾಚಕಮಹಾಶಯರೆ, ಬಿಕ್ಕು + ಅಟ್ಟು = **ಬಿಕ್ಕಟ್ಟು** (ಎಂದರೆ ಬಿಕ್ಕನ್ನು ಹೊರಗೆ ಅಟ್ಟುವುದು ಎಂದರೆ ದುಃಖ) ಎಂದು ಹೇಳದೆ, ನಾನೀಗ ಬಿನ್ + ಕಟ್ಟು = ಬಿಕ್ಕಟ್ಟು (ಎಂದರೆ ಕಟ್ಟು ಇಲ್ಲದಂಥಾದ್ದು) ಎಂದೇ ಸಂಧಿಯನ್ನು ಮಾಡಬೇಕಾಗಿದೆ. ಯಾಕೆ ? 'ಬಿನ್ + ಕಟ್ಟು' ಎಂಬುದೆ ಇಂದು ಒಂದು ಸುಸಂಧಿಯಾಗಿದೆ; ಇದನ್ನು ಯಾರೂ ಕಳೆದುಕೊಳ್ಳುವಂತಿಲ್ಲ. ಆದರೆ ನನಗೆ ಮಾತ್ರ ಆ ಸುಸಂಧಿ ಇಲ್ಲ, ಇದ್ದಿದ್ದರೆ ನಾನು ಈ ಮಾತನ್ನೆ ಹೇಳುತ್ತಿರಲಿಲ್ಲ. ನನಗೆ ಇದ್ದುದು ಕಟ್ (cut) ಉ ! ಎಂದರೇನು ? ನಿಮಗೆ

ತಿಳಿಯಬಹುದಲ್ಲವೆ? ಓಹೊ, ಮರೆತೆ! ಈಗ ಹಿಂದೀ ಭಾಷೆಯನ್ನು ಒತ್ತಾಯಪಾಗಿ (ಕಡ್ಡಾಯದಿಂದ) ಕಲಿಸುವರಲ್ಲವೆ? ಹಿಂದೀ ಕಲಿತರೂ ನೀವು ಹೇಅರ್‌ಕಟ್ (Hair Cut) ಮಾಡಿಸುತಿರಬಹುದಲ್ಲ? ಆಹಾ! ಆ ಕಟ್‌ಊ ಈ ಕಟ್‌ಊ ಒಂದೇ! ಇಷ್ಟೇ ವ್ಯತ್ಯಾಸ-ಒಂದು ಸರಕಾರೀ, ಇನ್ನೊಂದು ಖಾಸಗಿ.

ಸರಕಾರದ್ದೂ ಒಂದು ಕಟ್ಟು ಇದೆ. ನಾನು ಆ ‘ ಕಟ್ಟಿ ’ ಗೆ ಸೇರಿದವ, ಸೇಕಡಾ ದಹಾ—ಒಳಿತೆನ್ನಿ—ನೂರಕ್ಕೆ ಹತ್ತು ಎಂಬ ಕಟ್ಟು. ಸರಕಾರ-ದಿಂದ ನಿಮಗೆ ಸಲ್ಲತಕ್ಕ ಎಲ್ಲದರಲ್ಲಿ ನೂರಕ್ಕೆ ಹತ್ತು ಕಡಮೆ—ನೂರರಲ್ಲಿ ಹತ್ತು ಕಡಿದೊಗೆಯುವುದು—ಟೆನ್‌ಪರ್ಸೆಂಟ್ ಕಟ್, ಹೀಗೆ ಹಿಂದುಸ್ತಾನದ ಮಾತೃಭಾಷೆಯಲ್ಲಿ ಹೇಳಬಹುದು........ನನಗೆ ಎರಡು ನೂರು ಸಂಬಳ—ಇದ್ದಿತು. ಈಗ ಅದೇ ೧೮೦ ಆಗಿದೆ. ಆದುದರಿಂದ ನನಗೆ ತೊಂದರೆ ಇಲ್ಲವೆ ವ್ಯಸನವಾಗಿರಬಹುದೆಂದು ನೀವು ಕಲ್ಪಿಸಿದ್ದರೆ—ನಿಮ್ಮ ಕಲ್ಪನೆ ತಪ್ಪು ಎಂದು ತೋರಿಸಿ ಕೊಡುವೆ—ಆದುದರಿಂದ ಕಲ್ಪಿಸುವ ಗೋಜಿಗೆ ಹೋಗ-ಬೇಡಿರಿ. ಈಗ ನಾನು ಉಡುವ ದೋತರ ೪೫ ಇಂಚು ಅಗಲು ಇದೆ, ಮೊದಲು ೫೦ ಇಂಚು ಇದ್ದಿತು; ಟೆನ್‌ಪರ್ಸೆಂಟ್ ಕಟ್! ನನ್ನ ಆಫೀಸ್ ಮೇಲಧಿಕಾರಿಗಳು ಕೇಳಿದರು, ಕಾಲು ಕಾಣಿಸುವಂತೆ ನಾನು ಅಸಹ್ಯವಾಗಿ ದೋತರವನ್ನುಟ್ಟುದೇಕೆ—ಎಂದು. Sir, cut your coat according to your cloth—ಎಂದು ಅವರದೆ ಗಾದೆಯ ಮಾತನ್ನು ಹೇಳಿದೆ. ‘ಹಾಗಾದರೆ ನಿನ್ನ ಕೋಟನ್ನು ಯಾಕೆ ಕಡಮೆ ಅಳತೆಗಿಳಿಸಿಲ್ಲ?’ ಎಂದರು ಸಾಹೇಬರು; ನಾನು ನಿರುತ್ತರನಾದೆ. ಕೋಟಿನ ಮೈಯನ್ನು ಕಡಮೆ ಮಾಡಿದರೆ ಕಿಸೆ (ಜೇಬು) ಗಳೇ ಕತ್ತರಿಸುವವಲ್ಲ ಎಂದು ಹೆದರಿಕೆ; ಕೋಟಿನ ತೋಳ್ಗಳನ್ನು ಕಡಮೆ ಮಾಡಿಸಿದರೆ ಯಾವಾಗಲೂ ಹನ್ನೆರಡು ಗಂಟೆಯನ್ನೇ ತೋರಿಸುವ, ಕೀಲಿ ಕೊಟ್ಟಾಗ ಮಾತ್ರ ನಡೆದಂತೆ ಮಾಡುವ, ಒಳಗಿನ ಮುಳ್ಳುಗಳನ್ನು ಮೈಮೇಲೆ ಎಬ್ಬಿಸುವಂತಹ ನನ್ನ ಕೈಗಡಿಯಾರದ ಸ್ವರೂಪ ಹೊರಬೀಳುವುದೆಂಬ ಹೆದರಿಕೆ! ಇದಲ್ಲದೆ ಇನ್ನೂ ಒಂದು ಹೆದರಿಕೆ. ಸಿಂಪಿಗನಿಗೆ ಕೂಲಿ-ಯಲ್ಲಿ ನೂರಕ್ಕೆ ಹತ್ತು ಕಡಮೆ ಕೊಡುವೆ ಎಂದಾಗ ಅವನು ಬಟ್ಟೆಯನ್ನಳೆ-ಯುವ ಇಂಚು ಪಟ್ಟಿಯಲ್ಲಿಯೂ ನೂರಕ್ಕೆ ಹತ್ತು ಕಡಮೆ ಎಂದ. ಅಂತೇ,

ದೋತರವೊಂದನ್ನೆ ಅಗಲಕ್ಕೂ, ಉದ್ದಕ್ಕೂ ನೂರಕ್ಕೆ ಹತ್ತರಷ್ಟು ಕಡಮೆ ಮಾಡಿದೆ; ಸುದೈವದಿಂದ 'ಶುದ್ಧ ಖಾದೀ' ಇದ್ದುದರಿಂದ ನೀರಿನಲ್ಲಿ ಹಾಕಿದ ಮೇಲೆ ೪೫ಕ್ಕೆ ೪೨ ರಂತೆ ಇನ್ನೂ ಕಡಮೆಯಾಯಿತು. ಇದಲ್ಲವೆ ಸ್ವಾರ್ಥ-ತ್ಯಾಗದ ಸಂಕೇತ ? ಕೋಟು ಮೊದಲಿನ ಅಳತೆಯದೆ ಇದ್ದುದರಿಂದ ಒಳಗೆ ಶರ್ಟನ್ನು ಉಪಯೋಗಿಸುವ ಆವಶ್ಯಕತೆಯೆ ಬೀಳಲಿಲ್ಲ. ಆದುದರಿಂದ, ವಾಚಕರೆ, Cut your shirt according to your Coat !

ಅಂದಿನಿಂದ ಸಂಸಾರವಲ್ಲಿ ನನಗೆ ಯಾವ ತೊಂದರೆಯೂ ಎನಿಸಿಲ್ಲ. ಭಾರತೀಯರಾದ ನಮಗೆ, ಸನಾತನ ವೈದಿಕ ಧರ್ಮದಲ್ಲಿ ಬೆಳೆದ ನಮಗೆ, ಅನೇಕ ರಾಜರಾಳಿದರೂ ಅನೇಕ ಧರ್ಮಗಳ ತಿಕ್ಕಾಟವಾದರೂ ಇದ್ದಂತೆಯೆ ಉಳಿದ ನಮಗೆ ಇಂತಹ ಸಂಗತಿಯಿಂದ ತೊಂದರೆ ಆದೀತೆ ? ಯಥಾ ರಾಜಾ ತಥಾ ಪ್ರಜಾಃ, ನಮ್ಮನ್ನಾಳುವವರು ಬಾಳುವಂತೆ ಬಟ್ಟೆ ಧರಿಸುವಂತೆ ನಾವೂ ಬಾಳುವೆವು, ಬಟ್ಟೆಧರಿಸುವೆವು. 'ನಾವು' ಎಂದರೆ ನಾವು ನೀವು ಗಂಡಸರೆಲ್ಲ ಎಂದರ್ಥ; 'ನಾವು' ಎಂದರೆ ನಾನು ಮತ್ತು ನನ್ನ ಹೆಂಡಿರು ಮಕ್ಕಳು ಎಂದರ್ಥವಲ್ಲ ಯಾಕೆಂದರೆ—ಛೆ! ಅದನ್ನೇನು ಹೇಳುವುದು ತಮ್ಮಂತಹ ಸುಜ್ಞ ಜನರ ಮುಂದೆ? ಹೆಂಗಸರ ಬುದ್ಧಿ ಮೊಳಕಾಲ ಕೆಳಗೆ ಎಂದು ನಮ್ಮ ಹಿರಿಯರೆ ಹೇಳಿಲ್ಲವೆ? ಆಯಿತು, ಅವರಿಗೆ ಅವರುಡುವ ಸೀರೆಯು ಯಾವಾಗಲೂ ಮೊಳಕಾಲ ಕೆಳಗೆಯೇ ಇರತಕ್ಕದ್ದಂತೆ! ತಮ್ಮ ಬುದ್ಧಿ ಮತ್ತೊಬ್ಬರಿಗೆ ಕಾಣಬಾರದೆಂಬ ದುರ್ಬುದ್ಧಿ! 'ನೀವು ತಲೆಗೆ ಟೊಪ್ಪಿಗೆಯನ್ನು ಹಾಕುವುದು ಬಿಟ್ಟರೆಂದರೆ ನಾನೂ ಸೀರೆಯ ಅಗಲದಲ್ಲಿ ಟೆನ್ ಪರ್ಸೆಂಟ್ ಕಟ್ ಮಾಡಿ ಮೊಳಕಾಲ ಮೇಲೆ ಸೀರೆಯನ್ನುಡುವೆ—ಅಲ್ಲಿಯವರೆಗೆ—' ಎಂದು ನಾಲಗೆ ಕಚ್ಚಿ ಅಣಕಿಸುವಂತೆ ಮೂಗು ಮುರಿದರು ನಮ್ಮವರು. 'ಹೇ, ಕರ್ತುಂ—ಮ ಕರ್ತುಮನ್ಯಥಾಕರ್ತುಂ ಶಕ್ತವಾದ ಕಾಂಗ್ರೆಸ್ ಸರಕಾರವೆ, ಹೆಂಗಸಿನ ನಾಲಗೆಯಲ್ಲಿ ಟೆನ್‌ಪರ್ಸೆಂಟ್ ಕಟ್ ಮಾಡಬಾರದಾಗಿತ್ತೆ? ಎಂದು ಒಳಗಿಂದೊಳಗೆಯ ಗೊಣಗಿದೆ ನಾನು. ಸದ್ಯಕ್ಕಂತೂ ನನ್ನ ಹೆಂಡತಿಯ ನಾಲಗೆಯಿಂದ, ದಿನಾಲು ನನ್ನ ನಿದ್ದೆಯಲ್ಲಿ ಟೆನ್ ಪರ್ಸೆಂಟ್ ಕಟ್ ಆಯಿತು.

ಹೆಂಡತಿಯ ಮಾತು ಹೋಗಲಿ—ಆದರೆ ಹುಡುಗರು ? ಆ ಗೋಳ-ನ್ನಂತೂ ದೇವನೇ ಬಲ್ಲ, 'ದೇವನೇ ಬಲ್ಲ' ಎಂದು ನಾನು ಬೇಕಾಗಿಯೆ ಹೇಳಿದ್ದೇನೆ. 'ಒಂದೂ ಸಾಯದೆ ಹತ್ತು ಮಕ್ಕಳನ್ನು ಹಡೆದವರಿಗೆ ಒಂದು ಮಗುವನ್ನು ಪುಕ್ಕಟೆಯಾಗಿ ಕೊಡಲಾಗುವದು' ಎಂದು ದೇವನು ಎಲ್ಲಿ ಯಾದರೂ ಜಾಹೀರಾತನ್ನು ಕೊಟ್ಟಿರುವನೊ ಏನೊ ! ನನ್ನ ಅನುಭವದ ಮಾತನ್ನು ಹೇಳುವೆ—ಅನ್ಯಥಾ ಗ್ರಹಿಕೆ ಬೇಡ, ದಯವಿಟ್ಟು, ಮಕ್ಕಳನ್ನೆಲ್ಲ ಶಾಲೆಗೆ ಕಳುಹಿಸುತ್ತಿರುವೆ. ಒಂದು ದಿವಸ ಎಲ್ಲರೂ ಪರೀಕ್ಷೆಯಲ್ಲಿ ನಾಪಾಸ (ಫೇಲ್) ಆಗಿ ಬಂದರು! 'ಯಾಕೆ' ಎಂದು ಕೇಳಿದರೆ 'ನಮಗೆ ದೊರೆತ ಮಾರ್ಕ್ಸ (ಗುಣ) ಗಳಲ್ಲಿ ನೂರಕ್ಕೆ ಹತ್ತು ಕಡಮೆ ಮಾಡಬೇಕೆಂದು ಸರಕಾರದವರ ಆಜ್ಞೆಯಾಗಿದೆಯಂತೆ ಎಂದು ಹೇಳಿದರು! ನೋಡಿದಿರಾ ವಾಚಕರೆ! ಮಾಸ್ತರ ಜನರಿಗಾದ ಕಟ್ ಚೊಕ್ಕಟ ಆಯಿತೊ ಪುಕ್ಕಟೆ ಆಯಿತೊ ? ವ್ಯವಹಾರದಲ್ಲಿ ನಡೆಯದ ನಾಣ್ಯಗಳನ್ನು ಟಂಕಸಾಲೆಯಲ್ಲಿ ತಿರುಗಿ ತೆಗೆದುಕೊಳ್ಳುವರಂತೆ. ಹಾಗೆಯೆ ಎಲ್ಲಿಯೂ ನಡೆಯದ ನನ್ನ ಮಕ್ಕಳನ್ನು ದೇವನು ತಿರುಗಿ ತೆಗೆದುಕೊಳ್ಳಬಾರದೆ ? ಇಲ್ಲವೆ ಮಕ್ಕಳೆಂಬ ಇನ್‌ಕಮ್ (Income = ಉತ್ಪನ್ನ) ಹೆಚ್ಚಾಗಿದ್ದ ನಮ್ಮಂತಹರಿಂದ ಹೆಚ್ಚಾದ ಮಕ್ಕಳನ್ನೆ ಸರಕಾರದವರು ಟ್ಯಾಕ್ಸ (Tax = ಕರ) ಎಂದಾದರೂ ತೆಗೆದು ಕೊಳ್ಳಬಾರದೆ ? ಇಲ್ಲವಾದರೆ ಮಕ್ಕಳು ಹುಟ್ಟುವುದರಲ್ಲಿಯೆ—ಹರಹರಾ ಶ್ರೀ ಟೆನ್ನು ಕಟ್ಟೇಶ್ವರಾ!

ಮನೆಯಲ್ಲಿ ಹೆಂಡಿರು—ಮಕ್ಕಳು—ಹೀಗಿದ್ದರೂ ನನಗೆ ಯಾವ ತೊಂದರೆಯೂ ಎನಿಸಿಲ್ಲ ಎಂದು ಹೇಳಿದೆ, ಈಗಲಾದರೂ ಹಾಗೆಯೆ ಹೇಳುವೆ. ಯಾಕೆಂದರೆ—ಹೆಂಡಿರು ಮಕ್ಕಳೆಂದರೇನು? ಸಂಸಾರಸಾಗರದ ಮೇಲೆ ಏಳುವ ಕ್ಷಣಿಕ ಬುದ್ಬುದಗಳು ! ಇದರಲ್ಲಿ ದೂರ-ದೃಷ್ಟಿಯಿಂದ ವಿಚಾರ ಮಾಡಿದಲ್ಲಿ ನನಗೆ ನನ್ನ ಹೆಂಡತಿಯ ಮತ್ತು ಮಕ್ಕಳ ಮಾತೇ ಯೋಗ್ಯ-ವೆನಿಸಿತು. ಇಲ್ಲವಾದರೆ, ನೀವೇ ಊಹಿಸಿ ನೋಡಿರಿ; ಈ ಕಡೆ ಮೊಳಕಾಲ ಸೀರೆಯನ್ನುಟ್ಟ ನನ್ನ ಹೆಂಡತಿ, ಈ ಕಡೆ ಶರ್ಟು ಇಲ್ಲವೆ ಮೊಳಕಾಲ ಮೇಲೆ ದೋತರವನ್ನುಟ್ಟ ನಾನು, ಹೀಗೆ ಇಬ್ಬರೂ ಕೂಡಿ ತಿರುಗಾಡಲು ಹೊರಟರೆ ನಾವಿಬ್ಬರೂ ಈ ಶತಮಾನದ ನವನಾಗರಿಕರಂತೆ ಕಾಣುವೆವೊ ಇಲ್ಲವೆ



“ ಹೀಗೆ ಇಬ್ಬರೂ ಕೂಡಿ ತಿರುಗಾಡಲು ಹೊರಟರೆ ನಾವಿಬ್ಬರೂ ಈ ಶತಮಾನದ ನವನಾಗರಿಕರಂತೆ ಕಾಣುವೆವೊ ಇಲ್ಲವೆ ರವಿವರ್ಮನ ಚಿತ್ರದಲ್ಲಿಯ ವಿಶ್ವಾಮಿತ್ರ–ಮೇನಕೆಯರಂತೆ ಕಾಣುವೆವೊ ? ”

—ಪುಟ ೭೮

ರವಿವರ್ಮನ ಚಿತ್ರದಲ್ಲಿಯ ವಿಶ್ವಾಮಿತ್ರ—ಮೇನಕೆಯರಂತೆ ಕಾಣುವೆವೋ ? ಅದರಂತೆಯೆ ನನ್ನ ಹುಡುಗರು ಎಲ್ಲರೂ ಪರೀಕ್ಷೆಯಲ್ಲಿ ಪಾಸಾಗಿದ್ದರೆಂದು ತಿಳಿಯೋಣ. ಮುಂದೆ ಅವರ ಗತಿ ಏನು ? ಹೊಟ್ಟೆಬಟ್ಟೆಗಳ ಸ್ಥಿತಿ ಏನು ? ಹೀಗಾಗಿ ನನಗೆ ನಿಜವಾಗಿಯೂ ಯಾವ ತೊಂದರೆ ಎನಿಸಿಲ್ಲ, ಎನಿಸುವಂತಿಲ್ಲ.

ಒಂದೇ ಒಂದು ತೊಂದರೆ ಮಾತ್ರ ಇದೆ. ನನ್ನ ಸಂಬಳದಲ್ಲಿ ನೂರಕೆ ಹತ್ತು ಕಡಿತವಾಯ್ತೆಂದಲ್ಲ; ನೂರರಲ್ಲಿ ಹತ್ತು ಕಳೆದರೆ ಒಂದೇ ಸೊನ್ನೆ ಉಳಿಯುವದೆಂದು ಯಾರೋ ಹೇಳಿದರಂತೆ, ಆ ಮಾತು ನಿಜ ಎಂದು ನನಗೆ ಈಗ ತೋರುತ್ತಿದೆ. ನನ್ನ ನೂರರಲ್ಲಿ ನನ್ನ ಹತ್ತು ಕಳೆದುದಕ್ಕೆ ನನ್ನ ಎಷ್ಟೋ ಸಾಹುಕಾರರಿಗೆ ಒಂದೇ ಒಂದು ಸೊನ್ನೆ ಉಳಿದಂತಾಗಿದೆ. ಆದುದ-ರಿಂದ ನನಗೆ ನನ್ನ ವಿಷಯವಾಗಿ, ಒಂದು ವ್ಯಕ್ತಿಯ ವಿಷಯವಾಗಿ ಯಾವ ತೊಂದರೆಯೂ ಎನಿಸಿಲ್ಲ. ವಿಶಾಲದೃಷ್ಟಿಯಿಂದ ವಿಚಾರ ಮಾಡಿದಾಗ ಮಾತ್ರ ನನಗೆ ತೊಂದರೆ ಎನಿಸಿತು, ಒಂದು ಮಹಾತತ್ವದ ದುರುಪಯೋಗವಾಗು-ವದಲ್ಲ ಎಂದು ವ್ಯಸನವೂ ಎನಿಸಿತು. ನೂರರಲ್ಲಿ ಹತ್ತು ಕಡಮೆ ಮಾಡ ಬೇಕೆಂಬುದು ಜಗತ್ತನ್ನು, ಸುವರ್ಣಭೂಮಿಯಾದ ನಮ್ಮ ಭಾರತವನ್ನು ಉಳಿಸುವ, ಉದ್ಧಾರಗೊಳಿಸುವ ತತ್ವ. ಆ ತತ್ವದ ಸದ್ವಿನಿಯೋಗವಾದಲ್ಲಿ ಮಾತ್ರ ಉದ್ಧಾರವಾಗುವುದೆಂದು ನನ್ನ ವಿಚಾರ. ನೂರಕ್ಕೆ ಹತ್ತು ಕಡಮೆ ಮಾಡಬೇಕಾದ ವಸ್ತುಗಳ ಮತ್ತು ವಿಷಯಗಳ ಪಟ್ಟಿಯೆ ಸರಕಾರಕ್ಕೆ ಸಮರ್ಪಕವಾಗಿ ತೋಚಿಲ್ಲ, ಎಂದು ನಾನು ಧಾರ್ಷ್ಟ್ಯದಿಂದಲೂ ವಿನಯ-ದಿಂದಲೂ ಹೇಳಬಯಸುತ್ತೇನೆ; ಮತ್ತು ಸರಕಾರದ ಅವಗಾಹನೆಗಾಗಿ ಆ ವಸ್ತುಗಳ ಮತ್ತು ವಿಷಯಗಳ ಪಟ್ಟಿಯನ್ನೂ ಇಲ್ಲಿ ಕೊಡಬಯಸುತ್ತೇನೆ.

೧) **ಗೊತ್ತುವಳಿಗಳು** (Resolutions). ಭಾರತದ ಚಳಿಗಾಲದ ಪೈರು ಎಂದರೆ ಗೊತ್ತುವಳಿಗಳು ಎಂದು ಚಳಿಗಾಲದ ಅನೇಕ ಸಮ್ಮೇಳನ ಗಳಿಗೆ ಹೋಗಬೇಕಾಗುವ ಅನೇಕ ಜನರ ಅನಿವಾರ್ಯ ಅನುಭವಗಳಿಂದ ಹೇಳಬಹುದು. ಈ ಸಮ್ಮೇಳನಗಳ ಮುಖ್ಯ ಕೆಲಸವೆಂದರೆ ಗೊತ್ತುವಳಿ ಗಳನ್ನು ಸ್ವೀಕಾರ ಮಾಡುವುದು. ಇಂದು ಬೇಕಾದಲ್ಲಿ ರಜೆಯ ದಿನಗಳಲ್ಲಿ ತಿರುಗಾಡಿ ಬರುವಂತೆ ರೈಲ್ವೇ ಟಿಕೆಟ್ಟುಗಳಿದ್ದರೂ ಒಂದಕ್ಕಿಂತ ಹೆಚ್ಚು

ಸಮ್ಮೇಳನವನ್ನು ನೋಡುವದು ಸಹಸಾ ಯಾರಿಗೂ ಸಾಧ್ಯವಾಗುವುದಿಲ್ಲ. ಇದರಿಂದ ದೇಶದ ಜನರಲ್ಲಿ ಪರಸ್ಪರ ಪರಿಚಯ–ಸಹಕಾರಗಳು ಬೆಳೆಯುವು ದಕ್ಕೆ ತೊಂದರೆಯಾಗುವುದು. ಅನೇಕ ಭಿನ್ನ–ಭಿನ್ನ – ಜಾತಿ–ಭಾಷೆಗಳಿಂದ ಒಂದೆನಿಸದ ಭಾರತವನ್ನು ಒಂದುಗೂಡಿಸಲು ನಿಂತ ರಾಷ್ಟ್ರೀಯ ಸರಕಾರ–ದವರು ಈ ಪರಿಚಯ–ಸಹಕಾರಗಳು ಬೆಳೆಯುವಂತಲೇ ಮಾಡಬೇಕಲ್ಲವೆ ? ಎಂದರೆ ಅನೇಕ ಜನರು ಅನೇಕ ಭಾಗಗಳಲ್ಲಿ ನಡೆಯುವ ಅನೇಕ ಸಮ್ಮೇಳನ ಗಳನ್ನು ನೋಡುವಂತೆ ಮಾಡಬೇಕಲ್ಲವೆ ? ಅದಕಾಗಿ ಸಮ್ಮೇಳನಗಳಲ್ಲಾ-ಗುವ ಗೊತ್ತುವಳಿ (ಇದರ ಹೊರತಾಗಿ ಅಲ್ಲಿ ಮತ್ತೇನೂ ಇರುವದಿಲ್ಲವಾದ್ದ ರಿಂದ) ಗಳ ಆಳತೆಯಲ್ಲಿ ನೂರಕ್ಕೆ ಹತ್ತರಷ್ಟಾದರೂ ಕಡಮೆ ಮಾಡುವುದು ಹಿತವಲ್ಲವೆ ? ಉದಾಹರಣಾರ್ಥವಾಗಿ ' ಪ್ರತಿಯೊಂದು ಗೊತ್ತುವಳಿ ಯಲ್ಲಿಯ 'ಇಂದು ಇಂತಹ ಊರಲ್ಲಿ ಇಷ್ಟನೆಯ ಅಧಿವೇಶನಕ್ಕಾಗಿ ನೆರೆದ ........ಜೋರಾಗಿ, ತಲೆವಾಗಿ, ಹಟದಿಂದ ಕೈಮುಗಿದು ಪ್ರಾರ್ಥಿಸುತ್ತಿದೆ' ಎಂಬ ಶಬ್ದಗಳನ್ನು ತೆಗೆದರೆ ಗೊತ್ತುವಳಿಯನ್ನು ಓದುವುದರಲ್ಲೂ ಸ್ವಲ್ಪ ವೇಳೆ ವೆಚ್ಚವಾಗುವುದು; ಒಂದೋಂದು ಸಲ ಎಲ್ಲ ಓದಿದ ಮೇಲೆ ಅದರಂತೆ ನಡೆಯಲು ಯತ್ನಿಸಲು ಐದಾರು ನಿಮಿಷಗಳ ವರೆಗಾದರೂ ಸಮಯ ದೊರೆಯಬಹುದು. ಮುಖ್ಯವಾಗಿ ಅಲ್ಲಿಗೆ ಬಂದವರಿಗೆ ಅಲ್ಲಿಂದ ಬೇಗನೆ ಎದ್ದು ಹೊರಹೊರಟು ಮುಂದಿನ ಸಮಾರಂಭದಲ್ಲಿ ಭಾಗವಹಿಸಲು ಬರು ವುದು. ಇದಲ್ಲದೆ ಭಾರತದ ಇತಿಹಾಸವನ್ನು ಬರೆಯುತ್ತಿರುವ ಚಿತ್ರಗುಪ್ತ-ರಿಗೆ ಸಪ್ತಸಮುದ್ರಗಳ ಮಶಿಯನ್ನೆಲ್ಲ ಗೊತ್ತುವಳಿಗಾಗಿಯೆ ವೆಚ್ಚಿಸುವ ಹೆದರಿಕೆ ತಪ್ಪುವುದು. ಅಂತೂ ಸರಕಾರದವರು ಈ ವಿಷಯವನ್ನು ಹೆಚ್ಚಾಗಿ ಗಮನಿಸಿದರೆ ದೇಶದ ಐಕ್ಯಕ್ಕಾಗಿ ದೊಡ್ಡದೊಂದು ಹೆಜ್ಜೆಯನ್ನಿಟ್ಟಂತಾಗು ವುದು.

೨) ಎರಡನೆಯ ವಿಷಯವು ತುಸು ಸೂಕ್ಷ್ಮವಿದೆ. ತಾವು ವಿಶಾಲ ಹೃದಯ (ಟೆನ್ ಪರ್ಸೆಂಟ ಹೃದಯವಲ್ಲ) ದಿಂದೆ ಕೇಳುವಿರೆಂಬ ಆಶೆಯಿಂದಲೆ ಹೇಳುತ್ತಿದ್ದೇನೆ. ನಮ್ಮ ದೇಶದಲ್ಲಿ ಇಂದು ಅನೇಕ ಜಾತಿಗಳಿವೆ. ಪ್ರತಿ ಯೊಂದು ಜಾತಿಗೂ ಒಂದು ಸಾಂಕೇತಿಕ ಬಾಹ್ಯ ಚಿಹ್ನವಿದೆ. ಈ ಚಿಹ್ನ ವಸ್ತುವಿನ ಆಕಾರ ಅಳತೆಗಳಲ್ಲಿ ನೂರಕ್ಕೆ ಹತ್ತರಷ್ಟಾದರೂ, ಕಡಮೆ

ಮಾಡಲೇಬೇಕೆಂದು ನನ್ನ ಹಟವಿದೆ. ಇದೇನು ಹುಚ್ಚು ? ಎಂದು ತಾವು ಹೀಯಾಳಿಸಲಾಗದು. ವಿಶಾಲಹೃದಯದೊಡನೆ ದೂರದೃಷ್ಟಿಯನ್ನೂ ಬೆರೆಸಿದರೆ ನನ್ನ ಸೂಚನೆಯ ಮಹತ್ವವು ತಮಗೆ ತಿಳಿಯಬಹುದು. ಇಂದು ಧರ್ಮವೀರರಾದ ನಾವು-ಭಾರತೀಯರು—ಜಾತಿಯ ಅಭಿಮಾನದಿಂದ ಜೀವ ಕೊಡಲು ಕೂಡ ಸಿದ್ಧರಿದ್ದೇವೆ. ಆದರೆ ರಾಷ್ಟ್ರೀಯ ದೃಷ್ಟಿಯಿಂದ ಜೀವದ ಮಹತ್ವವು ಕೊಡುವುದಕ್ಕಿಂತ ಇಡುವುದರಲ್ಲಿದೆ. ಇಂದು ಜಾತಿಯ ನಿಮಿತ್ತವಾಗಿ ಕೆಲಸ ಸಿಕ್ಕದ ಒಬ್ಬನು ನಿರಾಸೆಗೊಳಗಾಗಿ ಜಾತಿಯ ಚಿಹ್ನವಸ್ತುವಿನಿಂದ ಉರುಲು ಹಾಕಿಕೊಂಡಾಗಲಿ, ಮರ್ಮಗಾಯ ಮಾಡಿಕೊಂಡಾಗಲಿ ಸಾಯಬಹುದು; ಅದರಂತೆಯೆ ಜಾತಿಯ ನಿಮಿತ್ತವಾಗಿಯೆ ಕೆಲಸವನ್ನು ದೊರಕಿಸಿದ ಇನ್ನೊಬ್ಬನು ಆಫೀಸಿನಲ್ಲಿ ಚಿಹ್ನವಸ್ತುವಿನ ಅರ್ಚನೆ ಆರಾಧನೆಗಳನ್ನು ನಡೆಸಬಹುದು, ಆ ಮೇಲೆ ಮೇಲಧಿಕಾರಿಯು ಅವನನ್ನು—ಅಂತೂ ಅಪಾಯವಾಗದಂತೆ ನೋಡಿಕೊಂಡು, ಜೀವಗಳನ್ನುಳಿಸಿಕೊಂಡು, ರಾಷ್ಟ್ರದ ಹಿತವನ್ನೆ ಮಾಡುವ ಉದ್ದೇಶದಿಂದ ಪ್ರತಿಯೊಂದು ಜಾತಿಯ ಸಾಂಕೇತಿಕ ಚಿಹ್ನವಸ್ತುಗಳ ಆಕಾರ ಅಳತೆಗಳಲ್ಲಿ ನೂರಕ್ಕೆ ಇಂತಿಷ್ಟರಷ್ಟು ಕಡಮೆಯಾಗಲೇಬೇಕು. ಕೈಗೆ ಸಹಜವಾಗಿ ನಿಲುಕುವಂತೆ ಕೀಲಿ (ಬೀಗದ) ಕೈಗಳನ್ನು ತೂಗಬಿಡಲು ಸಣ್ಣದಾದ ಜನಿವಾರವು ಅನುಕೂಲವಾಗುವುದಿಲ್ಲವೆಂದೂ ಇದಲ್ಲದೆ ಆ ಕೀಲಿ (ಬೀಗದ) ಕೈಗಳ ಸುರಕ್ಷಿತತೆಗಾಗಿ ಜನಿವಾರವು ದಾರಕ್ಕಿಂತ ತಂತಿಯದಾಗಿರಬೇಕೆಂದೂ ನನ್ನ ಬ್ರಾಹ್ಮಣ ಗೆಳೆಯರೊಬ್ಬರು ಸೂಚಿಸಿದ್ದಾರೆ. ಆದರೆ ಸಮಾಜದ ನಿಸ್ವಾರ್ಥ ಸೇವಕರೆನಿಸಬೇಕಾದ ಬ್ರಾಹ್ಮಣರಿಗೆ ಕೀಲಿಕೈಗಳೇಕೆ ? (ವಿ. ಸೂ. ಕೀಲಿಕೈ ಎಂದರೆ ಊಟದ ಕೈಯಲ್ಲ ಎಂಬುದನ್ನು ವಾಚಕರು ಗಮನಿಸಬೇಕಾದ ವಿಷಯ, ಊಟವಾದ ಮೇಲೆ ಹಲ್ಲುಗಳಲ್ಲಿ ಸಿಕ್ಕ ಅನ್ನದ ತುಣುಕುಗಳನ್ನು ತೆಗೆಯುವುದು ಕೀಲಿಕೈ. )

೩ ) ಮೂರನೆಯದು ಬಹಳೇ ಮಹತ್ವದ ವಸ್ತುವಾಗಿದೆ; ಸರಕಾರದ ಒಂದು ಡಿಪಾರ್ಟಮೆಂಟಿಗೆ ಸಂಬಂಧಿಸಿದೆ. ಅದಾವುದೆಂದರೆ ಮನಿಯಾರ್ಡರ್ ಫಾರ್ಮು. ಇಷ್ಟೊಂದುದ್ದವಾದ ಫಾರ್ಮನ್ನು ತಯಾರಿಸಿ ಸರಕಾರಕ್ಕೆ ಕಾಗದದ ವೆಚ್ಚವು ಹೆಚ್ಚಾಗುವುದು, ಆದುದರಿಂದ ಈ ಫಾರ್ಮಿನ ಕಾಗದದ ಅಳತೆಯಲ್ಲಿ ನೂರಕ್ಕೆ ಹತ್ತರಷ್ಟು ಕಡಿಮೆ ಮಾಡಿದರೆ ಜನತೆಗೂ

ಹಿತ, ಸರಕಾರಕ್ಕೂ ಮಿತ. ಈಗಿದ್ದ ಫಾರ್ಮಿನಲ್ಲಿ 'ಪೇಯಿ' (ಮನಿ-ಯಾರ್ಡರನ್ನು ಸ್ವೀಕರಿಸುವವ) ಎಂಬ ಒಂದು ಮಾತಿಗಾಗಿ ಒಂದು-ಒಂದೂವರೆ ಇಂಚು ಕಾಗದ ಬೇಕಾಗುವುದು. ಇದನ್ನಷ್ಟು ತೆಗೆದುಬಿಟ್ಟ-ರೆಂದು ತಿಳಿಯುವಾ. ಸರಕಾರಕ್ಕೆ ಅಷ್ಟು ಕಾಗದದ ಉಳಿತಾಯವಾದಂತಾ-ಯಿತು; ಇತ್ತ 'ಪೇಯಿ' (ಸ್ವೀಕರಿಸುವವ) ಇಲ್ಲದಂತಾಗಿ ಮನಿಯಾರ್ಡರು ಕಳುಹಿಸುವ ವೆಚ್ಚವೂ ನಾಗರಿಕನಿಗೆ ಉಳಿದಂತಾಯಿತು. ಒಟ್ಟು, ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ಎಂಬ ಭಗವದುಕ್ತಿಯನ್ನೂ ನಡೆಸಿದಂತಾಯಿತು. ಅಲ್ಲೆಂದರೆ ನರಕ ತಪ್ಪೀತೆ?

೪) ನಾಲ್ಕನೆಯ ವಿಷಯವನ್ನು ಹೇಳುವುದಕ್ಕೆ ಮುಂಚೆ ನನ್ನದೊಂದು ಪ್ರಾರ್ಥನೆಯಿದೆ; ಆ ಮಾತು ಅರಸಿಕತನವೆಂದು ತಾವು ಖೊಳ್ಳನೆ ನಕ್ಕು ಬಿಡಬಾರದು. ನಿಜವಾಗಿಯೂ ನಾನು ಹೇಳುವ ವಸ್ತುವಿನಲ್ಲಿ ಕಡಿತವಾದರೆ ನಮ್ಮ ಸಾಮಾಜಿಕ ಮತ್ತು ನೈತಿಕ ಪ್ರಗತಿಯಾಗುವುದು ಖಂಡಿತ. ಸದ್ಯಕ್ಕೆ ಆ ವಸ್ತುವು ಅನಾವಶ್ಯಕವಾಗಿ ಅಷ್ಟೊಂದು ಉದ್ದ ಇದೆ; ಅದು ಅಷ್ಟೊಂದು ಉದ್ದವಾಗಿರುವುದರಿಂದ ಅದಕ್ಕೆ ಹಾನಿಯೂ ಇಲ್ಲ, ನಮಗೆ ಲಾಭವೂ ಇಲ್ಲ. ಸುಮ್ಮ ಸುಮ್ಮನೆ ಪರಮಾತ್ಮನ ಸೃಷ್ಟಿಯಲ್ಲಿ ಕೀಳು ಮೇಲುಗಳನ್ನು ಕಲ್ಪಿ-ಸಲು ಮಾತ್ರ ಅವಕಾಶ ಕೊಟ್ಟಿದೆ. ಮಾರ್ಮಿಕರಾದ ವಾಚಕರಿಗೆ ಆ ವಸ್ತು ಯಾವುದೆಂದು ಬಿಡಿಸಿ ಹೇಳುವ ಆವಶ್ಯಕತೆಯೆ ಇಲ್ಲ, ಯಾಕಂದರೆ ಅದು ಸಾಕ್ಷಾತ್-ಕತ್ತೆಯ ಕಿವಿ ಎಂಬುದು ಈಗಾಗಲೆ ತಮಗೆ ಹೊಳೆದಿರಬಹುದು. ಈ ಕಿವಿಯ ಅಳತೆಯಲ್ಲಿ ನೂರಕ್ಕೆ ಇಂತಿಷ್ಟರಂತೆ ಕಡಿತವನ್ನು ಮಾಡ-ಬೇಕು. ಸದ್ಯಕ್ಕೆ ಭಾರತೀಯರಿಗೂ ಆ ಪ್ರಾಣಿಗೂ ವ್ಯತ್ಯಾಸವಿದೆ ಎಂಬು-ದೊಂದು ಕಲ್ಪನೆ ರೂಢವಾಗಿದೆ. ವ್ಯತ್ಯಾಸ ಎಲ್ಲಿದೆ? ಕಿವಿಯ ಅಳತೆಯಲ್ಲಿ? ಅಯ್ಯೋ, ಅಜ್ಞಾನವೆ! ಜನ್ಮದಾರಭ್ಯ ಹತ್ತು ಹನ್ನೆರಡು ವರುಷಗಳ ವರೆಗೆ ಮನೆಯಲ್ಲಿ ತಂದೆ ತಾಯಂದಿರೂ ಶಾಲೆಯಲ್ಲಿ ಗುರುಗಳೂ ಮೇಲಿಂದ ಮೇಲೆ 'ಹಿಂಡು'ತ್ತಿದ್ದುದರಿಂದ, ಸಹಜವಾಗಿಯೆ ಉದ್ದವಾಗಿ ಬೆಳೆಯಬೇಕಾದ ನಮ್ಮ ಕಿವಿಗಳು ಈ 'ಕಡಿತ'ದಿಂದ ಮಾತ್ರ ಸಣ್ಣವಾಗಿ ಉಳಿದಿವೆ ಎಂಬು-ದನ್ನು ನಾವು ಮರೆಯಬಹುದೆ? ತನಗೆ ಅಂತಹ ತಾಯ್ತಂದೆಗಳಾಗಲಿ ಶಿಕ್ಷಕರಾಗಲಿ ಇಲ್ಲವೆಂಬ ಮಾತ್ರಕ್ಕೆ ಕತ್ತೆಯು ಉದ್ದ ಕಿವಿಗಾಗಿ ಹಾಸ್ಯಕ್ಕೀ-

ಡಾಗಬೇಕೆ? ತಂದೆ-ತಾಯಿ-ಗುರು-ಹಿರಿಯರು ಪ್ರತಿನಿತ್ಯ ತಪ್ಪದೆ 'ಹಿಂಡಿ' ದ್ದಿಲ್ಲವೆಂದರೆ ನಮ್ಮ ಕಿವಿಗಳೆ ಇಷ್ಟೊತ್ತಿಗೆ ಎಷ್ಟು ನಿರರ್ಗಲವಾಗಿ ಬೆಳೆಯ ಬಹುದಾಗಿತ್ತೆಂಬುದನ್ನು ರಸಿಕರಾದ, ಕಲ್ಪನಾಕನಸಿಗರಾದ ವಾಚಕರು ಕಣ್ಣುಮುಚ್ಚಿ ಊಹಿಸಲಿ! ಇದಲ್ಲದೆ ದುಡಿಮೆ (being exploited) ಮತ್ತು ಭಾರವಾಹಕತ್ವ (serfdom) ದಲ್ಲಿ ತನಗೆ ಯಾರೂ ಇದಿರಿಲ್ಲವೆಂಬ ಹೆಮ್ಮೆಯು ಇಂದಿನ ಭಾರತೀಯರನ್ನು ನೋಡಿ ವರ್ಣಕವಾಹನನಿಗೆ ಉಳಿಯಬಾಗದು ಯೋಗ್ಯತೆ ಇಲ್ಲದಾಗ ಅದರ ಸಂಕೇತವಾದ ಲಂಬಕರ್ಣತ್ವವೇಕೆ? ಹೊರ-ಡಲಿ ಸರಕಾರೀ ಗಠ್ಠೊಟ್, ಕಡಿತವಾಗಲಿ ಕಿವಿ ಗರ್ದಭೇಶ್ವರನ! ಬೋಲೋ ಭಾರತಮಾತಾಕೀ ಜೈ! ಘೋಟಾ ಕಾನ್ ಝಿಂದಾಬಾದ್!

೫) ತಾವು ಯಾರಾದರೂ ಆಯುಷ್ಯದಲ್ಲಿ ಒಮ್ಮೆಯಾದರೂ ದೇಶೀಯ ಚಿತ್ರಪಟವನ್ನು ನೋಡಿದ್ದೀರಾ? 'ಒಮ್ಮೆಯಾದರೂ' ಎಂದು ಬುದ್ಧಿಪೂರ್ವಕವಾಗಿ ಕೇಳಿದ್ದೇನೆ; ಯಾಕೆಂದರೆ ಒಂದೇ ಆಯುಷ್ಯವು ಎರಡು ಸಲ ದೇಶೀಯ ಚಿತ್ರಪಟವನ್ನು ನೋಡಲು ಸಾಲುವುದಿಲ್ಲ ಎಂಬುದು ನನ್ನಂತೆ ನಿಮಗೂ ಗೊತ್ತಿರಲು ಸಾಕು. ದೇಶೀಯ ಪಟಗಳ ಉದ್ದಳತೆ (length) ಯ ವಿಷಯವಾಗಿ ಅನೇಕ ಇತಿಹಾಸಜ್ಞರು ಅನೇಕ ಮಾತುಗಳನ್ನು ಹೇಳಿದ್ದಾರೆ. ದ್ರೌಪದಿಯು ವಸ್ತ್ರಾಪಹರಣದ ಕಾಲದಲ್ಲಿ ದೇಶೀಯ ಚಿತ್ರಪಟದ ಪಟ್ಟಿ (roll of film) ಯನ್ನೆ ಉಟ್ಟಿರಬಹುದೆಂದೂ ಅದಕಾಗಿಯೆ ದುಃಶಾಸನನಿಗೆ ಅದನ್ನು ಪೂರ್ತಿಯಾಗಿ ಸೆಳೆಯುವುದು ಸಾಧ್ಯವಾಗಲಿಲ್ಲವೆಂದೂ ಒಬ್ಬ ಪರಿ-ಶೋಧನಕಾರರು ಅಭಿಪ್ರಾಯಪಟ್ಟಿದ್ದಾರೆ; ಲಂಕೆಯಲ್ಲಿ ಹನುಮಂತನು ನಮ್ಮ ದೇಶೀಯ ಚಿತ್ರಪಟದ ಪಟ್ಟಿಯನ್ನೆ ತನ್ನ ಬಾಲಕ್ಕೆ ಕೂಡಿಸಿಕೊಂಡನೆಂದೂ ಚಿತ್ರಪಟದ ಪಟ್ಟಿಗೆ ಬೆಂಕಿ ಹತ್ತುವುದು ಸುಲಭವೆಂದು ಅವನಿಗೆ ಗೊತ್ತಿದ್ದಿತೆಂದೂ ಆ ಜ್ಞಾನದಿಂದಲೆ ಲಂಕೆಯನ್ನು ಸುಡುವುದು ಸಾಧ್ಯವಾಯಿತೆಂದೂ ರಾಮಾಯಣದ ಅಭ್ಯಾಸ ಮಾಡಿದ ಜರ್ಮನ್ ಪಂಡಿತರೊಬ್ಬರು ಹೇಳಿದ್ದಾರಂತೆ! ಈಗಲಾದರೂ ಮೌಂಟ್ ಎವರೆಸ್ಟ್ (ಧವಲಗಿರಿ) ಗಿಂತ ಉನ್ನತವಾಗಿ ನಿಲ್ಲಿಸುವಷ್ಟು ಉದ್ದಳತೆಯನ್ನಿಡಬೇಕೆಂದು ನಮ್ಮ ಚಿತ್ರಪಟದ ವ್ಯವಸಾಯ-ಪಟುಗಳ ಆಕಾಂಕ್ಷೆ ಇದೆಯಂತೆ! ಆ ಆಕಾಂಕ್ಷೆಯು ಈಡೇರಿದರೆ ಅಂದು ಪಟವನ್ನು ನೋಡುವ ನಾವು ಕೈಲಾಸದರ್ಶನದ ಭಾಗ್ಯವನ್ನು

ಪಡೆಯಬಹುದೇನೋ! ಅದಿರಲಿ, ಕೈಲಾಸವು ನಮ್ಮ ಮಕ್ಕಳು-ಮೊಮ್ಮಕ್ಕಳಿಗೆ ದೊರೆಯಲಿ, ಆದರೆ ಸದ್ಯಕ್ಕೆ ನಾವು ಶಿವನ ಮತ್ತೊಂದು ಆಶ್ರಯ ಸ್ಥಾನವಾದ ಮಸಣದ ಅನುಭವವನ್ನು ಪಡೆಯುತ್ತಿದ್ದೇವಲ್ಲ! ಅದರಿಂದ ನಮ್ಮನ್ನುಳಿಸುವ ಧೀರರು ಯಾರು? ನಮ್ಮ ರಾಷ್ಟ್ರೀಯ ಸರಕಾರಗಳೇ ನಮ್ಮ ಧೀರನಾಯಕರಾಗಬಹುದೆಂದು ನನಗೆ ತೋರುತ್ತಿದೆ. ಚಿತ್ರಪಟದ ಉದ್ದಳತೆಯಲ್ಲಿ ನೂರಕ್ಕೆ ನೂರಾಹತ್ತರಂತೆ (ಅದಾಗದಿದ್ದರೆ ಹತ್ತರಂತೆ) ಕಡಮೆಯಾಗಬೇಕೆಂಬ ಕಾನೂನನ್ನು ಜಾರಿಯಲ್ಲಿ ತರಬೇಕು. ಹೀಗೆ ಮಾಡಿದಲ್ಲಿ ಆಯುಷ್ಯದ ಅರ್ಧಭಾಗವನ್ನಷ್ಟೆ ಸಿನೆಮಾ ಗೃಹದಲ್ಲಿ ಕಳೆದು ಉಳಿದರ್ಧ ಭಾಗವನ್ನು ಆಹಾರ ನಿದ್ರಾದಿಗಳಲ್ಲಿ ಕಳೆಯಲು ಸಾಧ್ಯವಾದೀತು; ಜನಾಂಗದ ಕಸುವು ಬೆಳೆದೀತು; ರಾಷ್ಟ್ರದ ಬಲ ಹೆಚ್ಚೀತ. ಸದ್ಯಕ್ಕೆ ನಮ್ಮಂತಹ ನೋಕರರಿಗಂತೂ ದೇಶಾಭಿಮಾನದಿಂದಾದರೂ ದೇಶೀಯಪಟವೊಂದನ್ನು ಪೂರ್ತಿಯಾಗಿ ನೋಡಬೇಕೆನಿಸಿದರೆ. ವರ್ಷೆರಡು ವರ್ಷ ರಜೆ ತೆಗೆದುಕೊಳ್ಳಬೇಕಾಗುವುದು. ನೋಡಿ ಬಂದೆವು ಎಂದು ತಿಳಿಯೋಣ, ಆ ಮೇಲೆ ಹೊರಗಿನ ಜಗತ್ತನ್ನು ನೋಡುವಷ್ಟು ಪ್ರಾಣ ಕಣ್ಣೊಳಗೆ ಉಳಿದಿರುವುದಿಲ್ಲ. ಆದುದರಿಂದ ಶ್ರೀಕೃಷ್ಣನ ಸಂಸಾರದಂತೆ ೧೬೦೦೦ ಪ್ರಮಾಣದಲ್ಲಿ ದೀರ್ಘವಾದ ಈ ಘಟನೆಂಯನ್ನು ಕಲಿಯುಗದಲ್ಲಿ ಕಡಮೆ ಮಾಡಬೇಕೆಂದು ಬೇಡುತ್ತೇನೆ.

೬) ರಾಷ್ಟ್ರೀಯ ಘೋರಣೆಯಿಂದ ಮಾತನಾಡುತ್ತ ಒಂದು ಅತ್ಯಂತ ಮಹತ್ವದ ವಸ್ತುವನ್ನ ಯಾದಿಯಲ್ಲಿ ಸೇರಿಸಲು ಮರೆತುಬಿಟ್ಟಿದ್ದೆ; ಅದೆಂವರೆ ನಮ್ಮ ನೆರಮನೆಯವರ ಅಂಗಾಂಗಗಳು. ಇದೇನು ಹುಚ್ಚು, ಇಲ್ಲವೆ ಸ್ವಾರ್ಥದ ಕ್ಷುಲ್ಲಕ ವಿಚಾರ, ಎನಬೇಡಿ. ಉದಾಹರಣಾರ್ಥವಾಗಿ ನಮ್ಮ ನೆರೆಮನೆಯವರ ಕೈಯುದ್ದದ ಕಲ್ಪನೆ ನಿಮಗಿದೆಯೆ? ನಾನು ಹೇಳುವ ಮಾತಿನಿಂದ ಹತ್ತರಷ್ಟಾದರೂ ಕಲ್ಪನೆ ತಮಗಾಗಬಹುದೆಂದು ನನ್ನ ಭರವಸೆ. ಇದು ನೋಡಿ, ಅವರ ಊಟದ ಮನೆಯಿಂದ ನಮ್ಮ, ಮನೆಯ ಅಂಗಣಕ್ಕೆ ನೂರು ಫೂಟುಗಳಿಗೆ ಮಿಕ್ಕುವಷ್ಟು ಅಂತರವಿದೆ. ಆದರೂ ಅವರ ಊಟ ಮುಗಿದಾಕ್ಷಣ ಒಂದು ನಿಮಿಷಾರ್ಧದಲ್ಲಿ ಆ ಎಂಜಲೆಲೆಗಳು ನಮ್ಮ ಅಂಗಣದಲ್ಲಿ! ಇನ್ನೊಂದು ಮಾತು: ನಮ್ಮ ಮಲಗುವ ಕೋಣೆಗೂ ಅವರು

ತಮ್ಮ ಮನೆಯಲ್ಲಿ ಮಲಗುವ ಕೋಣೆಗೂ ಏನಿಲ್ಲೆಂದರೂ ಎರಡುನೂರು ಫೂಟುಗಳ ಅಂತರವಿದೆ; ಆದರೂ ರಾತ್ರಿ ನಮ್ಮಲ್ಲಿ ನಡೆದ ಮಾತುಕತೆ ಶಬ್ದಕ್ಕೆ ಶಬ್ದ ಅವರಿಗೆ ಕೇಳಿಸುವದು—ಎಂಬುದನ್ನು ಅನುಭವದಿಂದ ಕಂಡಿದ್ದೇವೆ. ನಮ್ಮ ಮಾತು ಉದ್ದವಾಗಿರಬಹುದೊ ಇಲ್ಲವೆ ಅವರ ಕಿ........ ನೀವೇ ವಿಚಾರ ಮಾಡಿರಿ. ಇಂತಹ ಪರಿಸ್ಥಿತಿಯಲ್ಲಿ ಸರಕಾರದವರು ಲಕ್ಷ್ಮಣ-ಶೂರ್ಪನಖಾ ನ್ಯಾಯದ ಕಾಯಿದೆಯನ್ನು ಗೊತ್ತುಮಾಡಬೇಕು, ಇಲ್ಲವೆ ಪ್ರಕ್ಕಟಿಯಾಗಿ ನಮ್ಮ ನೆರೆಮನೆಯವರನ್ನೆ ಸಿ. ಆಯ್. ಡಿ. ಎಂದು ನಿಯಮಿಸಿ ಜನತೆಯ ಹಣದ ಅಪವ್ಯಯವನ್ನು ತಡೆಯಬೇಕು.

೭) ವಾಚಕ ಮಹಾಶಯರೆ, ಇನ್ನೂ ಎಷ್ಟೋ ಮಾತುಗಳನ್ನು ನಾನು ಹೀಗೆಯೆ ಕಾಣಿಸಬಹುದು. ಆದರೆ ಆಡಿದಂತೆ ಮಾಡಿತೋರಿಸಬೇಕೆಂಬ ಹಟದಿಂದ, ಸದುದ್ದೇಶದಿಂದ ನಾನು ಹೇಳಬೇಕೆಂಬುದರಲ್ಲಿಯೇ ಟೆನ್-ಪರ್ಸೆಂಟ್ ಕಟ್ ಮಾಡುವವನಿದ್ದೇನೆ. ಅದರಂತೆಯೆ ಬರೆದುವರಲ್ಲಿ ಅಚ್ಚಿಗೆ ಕಳುಹಿಸುವಾಗ ಟೆನ್ ಪರ್ಸೆಂಟ್, ಅಚ್ಚಿನ ಮೊಳೆಗಳಲ್ಲಿ ಜೋಡಿಸುವಾಗ ಟೆನ್ ಪರ್ಸೆಂಟ್, ಪ್ರೂಫ್ ಕರೆಕ್ಶನ್ ಮಾಡುವಾಗ ಟೆನ್‌ಪರ್ಸೆಂಟ್, ಸ್ಟ್ರಾಯಿಕ್ ಆರ್ಡರ ಕೊಡುವಾಗ ಟೆನ್‌ಪರ್ಸೆಂಟ್, ಆ ಮೇಲೆ ತಾವಾದರೂ ನನ್ನ ಉದಾಹರಣೆಯನ್ನನುಕರಿಸಿ ಓದುವಾಗ ಟೆನ್‌ಪರ್ಸೆಂಟ್, ನೆನಪಿಡ್ವುವಾಗ ಟೆನ್‌ಪರ್ಸೆಂಟ್, ಅದರಂತೆ ಆಚರಿಸುವಾಗ ಟೆನ್‌ಪರ್ಸೆಂಟ್ ಹೀಗೆ ಕಡಮೆ ಮಾಡುತ್ತ ಹೋಗಬೇಕೆಂದು ಸೂಚನೆ ಇದೆ. ಆದುದರಿಂದ ಕೊನೆಗೆ ಒಂದೇ ಒಂದು ಎಚ್ಚರಿಕೆಯ ಮಾತನ್ನು ಹೇಳಿಡುತ್ತೇನೆ. ನನ್ನವಿಷಯವಾಗಿ ಯಾರೋ ಸುಳ್ಳುಸುದ್ದಿಯನ್ನು ಹರಡಿರುವರಂತೆ; ಮ್ಯುನಿಸಿಪಾಲಿಟಿಯ ಮೆಂಬರರಲ್ಲಿ; ರಶಿಯಾದಲ್ಲಿ ಸ್ಟಾಲಿನನು ರೂಢಮಾಡಿದ ಕಟ್ ಜಾರಿಯಲ್ಲಿ ತರಬೇಕೆಂದು ನಾನು ಅಭಿಪ್ರಾಯಪಟ್ಟಿರುವೆನಂತೆ! ಇದು ಸುಳ್ಳು, ಸುಳ್ಳು ಎಂದು ಹತ್ತುಸಲ ಸಾರುತ್ತೇನೆ (ಒಂಬತ್ತು ಸಲವೆ ಉಳಿಯುವುದು). ರಶಿಯಾದಲ್ಲಿ ಅನೇಕ ಮುಂದಾಳುಗಳಿಗೆ ತಲೆ ಇದ್ದಿತು; ಆದುದರಿಂದ ಸ್ಟಾಲಿನ್‌ನಿಗೆ ಅದನ್ನು ಕಟ್ ಮಾಡುವದು ಸುಲಭವಾಯಿತು. ಆದರೆ ನಮ್ಮ ಮ್ಯುನಿಸಿಪಾಲಿಟಿ—ಅಥವಾ ನಾನಾದರೂ ಹೆಚ್ಚಿಗೆ ಹೇಳಬೇಕೆ? ಇಂತಹ ವಿಚಾರವು ನನಗೆ ತೋಚುವುದಾದರೂ ಶಕ್ಯವಿದೆಯೆ? ಇದರಂತೆ

ಇನ್ನೊಂದು ತಪ್ಪುಗ್ರಹಿಕೆಯನ್ನು ಇಲ್ಲಿ ದೂರಮಾಡಬಯಸುವೆ. ನಾನು ಸರಕಾರೀ ನೋಕರನಿದ್ದು ತಿಂಗಳಿಗೆ ಮುವ್ವತ್ತು ದಿವಸಗಳಲ್ಲಿ ನೂರಕ್ಕೆ ಹತ್ತರಂತೆ ಕಡಿಮೆಮಾಡಬೇಕೆಂದೂ ಹಾಗಾದರೆ ನನ್ನಂತಹರಿಗೆ ಇಪ್ಪತ್ತೇಳು ದಿವಸಗಳಿಗೆಯೆ ಸಂಬಳ ದೊರೆಯಬಹುದೆಂಬ ಆಸೆಯಿಂದ ನಾನು ಹಾಗೆ ಮಾಡಿರುವೆನೆಂದೂ ಯಾರೊ ಗುಲ್ಲು ಎಬ್ಬಿಸಿದ್ದಾರೆ. ಶಿವ ಶಿವಾ! ಹರಿಹರೀ! ಯಾ ಅಲ್ಲಾ! (ಮಿಕ್ಕ ಜಾತಿಯವರು ತಂತಮ್ಮ ದೇವತೆಯ ಹೆಸರನ್ನು ಕೂಡಿಸಿಕೊಳ್ಳಲಿ) ನಾನು ಇಂತಹ ಸ್ವಾರ್ಥಿಯೆ? ಇಷ್ಟು ಸಂಕುಚಿತ ಭಾವನೆಯವನೆ? ನಾನು ಹೇಳಿದ ಮಾತೇ ಬೇರೆಯಾಗಿದೆ. ರಾಷ್ಟ್ರೀಯ ಹಿತದ ದೃಷ್ಟಿಯಿಂದ, ಸಮಾಜದ ಬೆಳೆವಣಿಗೆಯ ದೃಷ್ಟಿಯಿಂದ, ಆರ್ಥಿಕ ಉನ್ನತಿಯ ದೃಷ್ಟಿಯಿಂದ ಸರಕಾರದವರು ಪ್ರತಿಯೊಬ್ಬ ಭಾರತೀಯನ ಆಯುಷ್ಯವನ್ನು ನೂರಕ್ಕೆ ಹತ್ತರಂತೆ ಕಡಿಮೆಮಾಡಬೇಕೆಂದು ನಾನು ಹೇಳಿದ್ದು ಆವರೆ ನನ್ನ ಮಾತಿನಲ್ಲಿಯ ಸತ್ಯ, ನನ್ನ ಮನಸ್ಸಿನಲ್ಲಿಯ ಅಹಿಂಸೆ ಇವು ದುಷ್ಟರ ಬಾಯಲ್ಲಿ (ಅವರ ನಾಲಗೆ ಕಡಿದು ಬೀಳಲಿ!)— ಅಥವಾ ಶಾಂತಂಪಾಪಂ........... ಅತ್ಯತಿಷ್ಠತ್ ದಶಾಂಗುಲಂ (ಹತ್ತರ ಪ್ರಮಾಣದಲ್ಲಿ ಹೆಚ್ಚಾಗಿದೆ.) ಎಂದರೆ ಹತ್ತರಷ್ಟು ಕಡಿಮೆ ಮಾಡುವುದು ಯುಕ್ತವಾದುದು. ಎಂದು ವೇದವೆ ಹೇಳುತ್ತಿರುವಾಗ ಬೇರೆ ಹೇಳಲು ನಾನು ಯಾರು?

ಜೂನ '೩೮

---

# ಪಿತೃಗಳ ಪೇಚಾಟ

ಒಂದಾನೊಂದು ದಿನ ಯಮಲೋಕದಲ್ಲಿ ಒಂದು ಸಂಗತಿ ನಡೆಯಿತು. ಯಮನ ಕಚೇರಿಯಲ್ಲಿ ಶ್ರೀಯುತರಾದ ಚಿತ್ರ ಮತ್ತು ಗುಪ್ತ ಎಂಬ ಇಬ್ಬರು ಕಾರಕೂನರಿದ್ದುದು ತಮಗೆ ಗೊತ್ತಿದೆಯಷ್ಟೆ? ಆ ಇಬ್ಬರಿಗೂ ಏಕಕಾಲಕ್ಕೆ ಬೇಜಾರ ಬಂದಿತು. ಇಪ್ಪತ್ತುನಾಲ್ಕು ತಾಸು ಬೆನ್ನು ಬಾಗಿಸಿ ಬರೆದು ಬೆನ್ನು ಬಾಗಿದ್ದಕ್ಕಾಗಿ ಹೊಟ್ಟೆ ಒಳಸೇರಿತಲ್ಲದೆ ಮತ್ತಾವ ಪ್ರಾಪ್ತಿಯೂ

ದೊರೆಯುಲಿಲ್ಲವಲ್ಲ ಎಂದು ಅವರ ಬೇಜಾರ. ಇದಲ್ಲದೆ ಇಬ್ಬರಿಗೂ ಕೋಪ ಬಂದಿತು. ಯಾವ ಗಂಡಸಿಗೆ ಅಂತಹ ಪ್ರಸಂಗದಲ್ಲಿ ಕೋಪ ಬರಲಿಕ್ಕಿಲ್ಲ? ಪಾಪ! ಇಡಿಯ ಜನ್ಮ ಬಾಗಿಸಿದ ಬೆನ್ನನ್ನು ಮನೆಯ ಹೆಂಡತಿಯ ಇದಿರಿನಲ್ಲಿ ಕೂಡ ಸೆಟೆಸಲಾಗದಂತಹ ಅವಮಾನಕಾರಕ ಪರಿಸ್ಥಿತಿ, ಅಕಾಲಿಕ ವಾರ್ಧಕ್ಯ ಅಪೌರುಷೇ ಅನದಸೆ ಅವರಿಗೆ ಬಂದಿತು! ಆದಕಾಗಿ ಕೋಪದ ಭರದಲ್ಲಿ ಇಬ್ಬರೂ ಒಬ್ಬರನ್ನೊಬ್ಬರು ನೋಡಿ, ಪರಸ್ಪರ ಹೃದ್ಗತವನ್ನು ತಿಳಿದು ಕೊಂಡು ಒಳಗಿನ ನಿರ್ಧಾರಕ್ಕಾಗಿ, ತಲೆ ಎತ್ತಿ ಬಾಗಿದ ಬೆನ್ನಿನಿಂದಲೆ ಬಯಲಿಗೆ ಬಂದರು ಎಷ್ಟೋ ಹೊತ್ತು, ತೋರಣದ ಕಮಾನಿನಂತೆ ಹತ್ತಿರ ಹತ್ತಿರ ನಿಂತು, ಪಿಸುಗುಟ್ಟಿಕೊಂಡು 'ನಾಳೆನಿಂದ ಕೆಲಸಕ್ಕೆ ಹಾಜರಾಗುವುದಿಲ್ಲ' ಎಂದೂ ಪರಸ್ಪರ ಬೆನ್ನನ್ನು ಕುಲುಕಿ ತಂತಮ್ಮ ಮನೆಗೆ ತೆರಳಿದರು. ಯಮರಾಯನಿಗೆ ಸದ್ಯಕ್ಕೆ ಈ ಮಾತಿನ ಸುಳಿವೆ ಹತ್ತಿರವಿಲ್ಲ.

ಆದರೆ ಕೆಲವೇ ದಿವಸಗಳಲ್ಲಿ ಭೂಲೋಕದಲ್ಲಿ ಹಾಹಾಕಾರವೆದ್ದಿತು. ಭೂಮಿ ತಾಯಿಯು ಒಂದೇಸವನೆ 'ಗೊಳೊ' ಎಂದು ರೋದಿಸತೊಡಗಿದಳು. ಯಾಕೆನ್ನುವಿರಾ? ಚಿತ್ರ ಮತ್ತು ಗುಪ್ತ ಮಹಾಶಯರ ಸಂಪು (ಮುಷ್ಕರ) ಅದಕ್ಕೆ ಕಾರಣ. ಈ ಮಹಾಶಯರು ದಿನಾಲು ತಮ್ಮ ಕಚೇರಿಯಲ್ಲಿ ಮಾಡತಕ್ಕ ಕೆಲಸ ವಿಚಿತ್ರ ಮತ್ತು ವಿಶಿಷ್ಟವಾದಷ್ಟೆ ಮಹತ್ವದ್ದೂ ಆಗಿತ್ತು. ಆ ಕೆಲಸವೆಂದರೆ ಬಡ್ಡಿ ವ್ಯವಹಾರವನ್ನು ಮಾಡುವವರಂತೆ, ಬೆಳಗಾದ ಕೂಡಲೆ 'ಇಂದು ಯಾರಿಂದ ಬಡ್ಡಿ ಬರತಕ್ಕದ್ದಿದೆ, ಯಾರ ಮುದ್ದತು ಇಂದಿಗೆ ಮುಗಿದಿದೆ' ಮುಂತಾಗಿ ಲೆಕ್ಕ ತೆಗೆದು ಆಯಾ ಸಾಲಗಾರನನ್ನು ಕರೆಯಿಸಿಕೊಳ್ಳುವ ಸಾಹುಕಾರನ ಕಾರಕೂನರಂತೆ ಯಮಧರ್ಮರಾಯನಿಗೆ ಈ ಚಿತ್ರಪ್ಪ ಮತ್ತು ಗುಪ್ತಣ್ಣನು 'ಇಂದು ಯಾರ ಪುಣ್ಯ ತೀರಿದೆ, ಇಂದು ಯಾರ ಆಯುಷ್ಯದ ಬಟ್ಟಲ ತುಂಬಿದೆ, ಇಂದು ಯಾರ ಪಾಪದ ಅವಧಿ ಮೀರಿದೆ' ಎಂದು ಮುಂತಾಗಿ ಇವರಿಬ್ಬರು ಲೆಕ್ಕವನ್ನು ತೆಗೆದು ಯಮರಾಯನಿಗೆ ಒಪ್ಪಿಸುವರು. ಆಗ ಯಮರಾಯನು ತನ್ನ ದೂತನನ್ನೊ, ಕೋಣನನ್ನೊ, ನಾಯಿಯನ್ನೋ (ಅವರವರ ಜಾತಿಗನುಸರಿಸುವಂತೆ) ಕಳಿಸಿಕೊಟ್ಟು ಆಯಾ ವ್ಯಕ್ತಿಗಳನ್ನು ತನ್ನ ಲೋಕಕ್ಕೆ ಹಿಡಿದು ತರಿಸುವನು. ಹೀಗಿರುವಾಗ ಚಿತ್ರಪ್ಪನೂ ಗುಪ್ತಣ್ಣನೂ ಕೆಲಸಕ್ಕೆ ಬಾರದಂತಾಗಿ ಒಂದೆರಡು

ದಿವಸಗಳಲ್ಲಿಯೆ ಲೆಕ್ಕ ತಪ್ಪಿತು. ಯಮಲೋಕಕ್ಕೆ ಯಾರೂ ಬರಲೇ ಇಲ್ಲ. ಯಾರು ಬರಬೇಕೆಂಬುದರ ಲೆಕ್ಕವೂ ಇರಲಿಲ್ಲ ಭೂಲೋಕವೆಂದರೆ ಮುಂಬಯಿ ಸ್ಟೇಶನವಿದ್ದಂತೆ; ಎಂದರೆ ಯಮಲೋಕಕ್ಕೆ ಬರತಕ್ಕವರು ಭೂಲೋಕದಿಂದಲೆ ಬರಬೇಕಾಗುವುದು. ಯಮಲೋಕಕ್ಕೆ ಯಾರೂ ಬರಲಿಲ್ಲವೆಂದರೆ ಎಲ್ಲರೂ ಭೂಲೋಕದಲ್ಲಿಯೆ ಉಳಿದರೆಂದರ್ಥವಲ್ಲವೇ ? ಹೀಗಾಗಿ ಪಾಪ! ಭೂಮಿತಾಯಿಗೆ ಒಂದೆರಡು ದಿನಗಳಲ್ಲಿಯೆ ಭಾರ ತಡೆಯದಂತಾಯ್ತು. ಅಸಂಖ್ಯಾತರಾಗಿ ಓಡಾಡುವ ಜನರ ತುಳಿತಕ್ಕೆ ಅವಳ ಮೈ ಹುಡಿಯಾಯಿತು. ಕೊನೆಗೆ ನಿರುಪಾಯಳಾಗಿ, ಅವಳು ದೇವಲೋಕಕ್ಕೆ ಮೊರೆ ಇಡಬೇಕೆಂದು ನಿರ್ಧರಿಸಿದಳು. ಅವಳ ಅಂದಿನ ಗೋಳನ್ನು ಬಣ್ಣಿಸಲು ಶಕ್ಯವೆ ಇಲ್ಲ. ತೋಫುಗಳ ಗರ್ಜನೆಯಂತೆ ಅವಳ ಮೈ ಬಿಕ್ಕುಗಳಿಂದ ನಡುಗುತ್ತಿತ್ತು; ಮೇಲಿಂದ ಬೀಳುವ ಸಿಡಿಮದ್ದು (Bomb) ಗಳಂತೆ ಅವಳು ಸುಂಯ್ಗುಡುತ್ತಿದ್ದಳು; ನೀರಿನಲ್ಲಿ ಮುಳುಗುವ ನಿರುಪದ್ರವಿ ಪ್ರವಾಸಿಕರ ಹಡಗದಂತೆ ಅವಳ ದೃಶ್ಯ ಹೃದಯದ್ರಾವಕವಾಗಿತ್ತು; ಮರೆದೀವಿಗೆ Blackout ಯಂತೆ ಅವಳ ಕಪ್ಪಾದ ಕೂದಲೂ ನೆಲದವರೆಗೆ ಜೋತುಬಿದ್ದಿದ್ದುವು. ಹೀಗೆ ಅವಳು ದೇವಲೋಕದ ದಾರಿಯನ್ನು ತುಳಿಯತೊಡಗಿದಳು.

ಇತ್ತ ದೇವಲೋಕದಲ್ಲಿ ಒಂದು ತರದ ದೊಂಬಿಯೆ ನಡೆದಿದೆ. ವಾಸವಾಗಿದ್ದವರೆಲ್ಲ ಬೀದಿಗಳ ಬಯಲಿಸಲ್ಲಿಯೆ ಗುಂಪುಗಟ್ಟಿ, ಆಕ್ರೋಶದಿಂದ, ಚೀತ್ಕಾರದಿಂದ, ಆಹ್ವಾನದ ಬೊಬ್ಬೆಗಳಿಂದ ಸುತ್ತಾಡುತ್ತಲಿದ್ದಾರೆ. ಯಾರಿಗೆ ಹೊರಗೆ ಬೀದಿಯಲ್ಲಿ ಸ್ಥಳ ಸಿಕ್ಕಲಿಲ್ಲವೊ ಅವರಷ್ಟೇ ಮನೆಗಳ ಕಿಟಕಿ-ಮಾಳಿಗೆ-ಉಪ್ಪರಿಗೆಗಳಲ್ಲಿ ನಾ ಮುಂದೆ ನೀ ಮುಂದೆ ಎಂದು ನುಗ್ಗುತ್ತಲಿದ್ದಾರೆ. ದೇವಲೋಕದ ದೃಶ್ಯವಾದರೂ, ನೆರೆದ ಜನರೆಲ್ಲ ಮಾನವ ಆಕೃತಿಯುಳ್ಳವರೆ ಆಗಿದ್ದಾರೆ. ಹೇಗೆಂದರೆ ಇಂದು ದೊಂಬಿ ಹೆಚ್ಚಿಸಿದವರೆಲ್ಲ ಭೂಲೋಕವನ್ನು ಬಿಟ್ಟು ದೇವಲೋಕಕ್ಕೆ ಹೋದವರು, ಪಿತೃಗಳು. ಇವರ ಇಂದಿನ ದೊಂಬಿಗೆ ಕಾರಣವೆಂದರೆ ಅನ್ನದ ಅಭಾವ. ಪಿತೃಗಳಿಗೆ ದೊರೆಯುವ ಅನ್ನವೆಲ್ಲ ಭೂಲೋಕದಿಂದಲೆ ಬರತಕ್ಕದ್ದೆಂಬ ವ್ಯವಸ್ಥೆ (ಇಲ್ಲವಾದರೆ ತಮ್ಮ ಆಹಾರ ಸಾಮಗ್ರಿಯಲ್ಲಿ ಕೊರತೆ ಬಂದೀತೆಂಬ ಹೆದರಿಕೆ ಏನೋ ದೇವತೆಗಳಿಗೆ!) ಇಂದಿನವರೆಗೆ ಅದು ತಪ್ಪದೆ ಬರುತ್ತಿದ್ದಿತು. ಈಗ ನಾಲ್ಕೈದು

ದಿವಸಗಳಿಂದ ಮಾತ್ರ ಒಂದು ತುತ್ತು ಅನ್ನವಾಗಲೀ, ಗುಟುಕರಿಸಲು ಒಂದು ಹನಿ ನೀರಾಗಲೀ ಬಂದಿರಲಿಲ್ಲ. ದೇವಲೋಕದ ಅಂಚೆಖಾತೆಯಲ್ಲಿ ಏನಾದರೂ ಹೆಚ್ಚು-ಕೊರತೆಯಾಗಿ ಹೀಗಾಗಿರಬಹುದು ಎಂದು ಮೊದಲ ದಿನ ಪಿತೃಗಳಿಗೆ ಸಂದೇಹ. ಅದಕ್ಕಾಗಿ ಎರಡನೆ ದಿನ ಕೆಲ ಉತ್ಸಾಹಿ ಪಿತೃಗಳು ತಾವೇ ನಡೆದು ಅಂಚೆ ಕಚೇರಿಗೆ ಹೋದರು, ತಂತಮ್ಮ ವಿಳಾಸದ ಅನ್ನ ನೀರುಗಳನ್ನು ಸ್ವೀಕರಿಸಲಿಕ್ಕೆ. ಆದರೆ ಅಲ್ಲಿ ಹೋಗಿ ನೋಡಿದರೆ ಏನಿದೆ? ಎರಡು ದಿವಸವೂ ಭೂಲೋಕದಿಂದ ಒಂದು ಪ್ಯಾಕೆಟ್ (ಗಂಟು) ಬಂದೇ ಇಲ್ಲ, ಅದನ್ನು ಕೇಳಿದಾಕ್ಷಣ ಪಿತೃಗಳ ಜಡೆ ಸೆಟೆದು ನಿಂತಿತು. ಎಂತಹ ರೋಮಾಂಚಕಾರಕ ಸನ್ನಿವೇಶ! ಅಲ್ಲವೆ? ಸ್ವರ್ಗದಲ್ಲಿದ್ದೂ ಅನ್ನವನ್ನು ಕಾಣಲಾರರೆಂಬ ವ್ಯತ್ಯಾಸ ಪರಿಸ್ಥಿತಿ ಕಾವ್ಯಮಯವಾದಂತೆ ರೋಮಾಂಚ ಕಾರಕವೂ ಅಲ್ಲವೆ? ಕೋಪಾವೇಶದಿಂದ ಹಲ್ಲು ಕಡಿಯಬೇಕೆಂದಾಗ ಹಲ್ಲಿಲ್ಲದ್ದಕ್ಕಾಗಿ ತುಟಿಗಳನ್ನು ತಿನ್ನಬೇಕಾಯಿತು. ಒಂದೂ ಪ್ಯಾಕೆಟ್ ಬಂದಿಲ್ಲವೆ? ಅದು ಹೇಗೆ ಮತ್ತು ಯಾಕೆ ಎಂದು ಕ್ಷಣಾರ್ಧದಲ್ಲಿ ಅಲ್ಲಿ ಗುಂಪುಗೂಡಿದ ಪಿತೃ ಸಂಮರ್ದವು ಬೊಬ್ಬಿರಿಯತೊಡಗಿತು. ಅನೇಕ ದೇವತೆಗಳು ಹೆದರಿ ಇಂದ್ರನ ಕಡೆ ಬಂದು ಈ ದೊಂಬಿಯನ್ನು ತಡೆಯಲು ಕೂಡಲೆ ಉಗ್ರೋಪಾಯಗಳನ್ನು ಕೈಗೊಳ್ಳಬೇಕೆಂದು ಒತ್ತಾಯಪಡಿಸಿದರು. ಇಂದ್ರನ ಐರಾವತನನ್ನು ಜನ ಸಂಮರ್ದದಲ್ಲಿ ನೂಕಬೇಕೆಂದು ಕೆಲವರು; ಮೂಗಿನಲ್ಲಿ ಸುರೆಯನ್ನು ತುಂಬಿ ಯಮನ ಕೋಣನನ್ನು ಗುಂಪಿನ ಮೇಲೆ ದೂಡಬೇಕೆಂದು ಕೆಲವರು; ರಂಭೆ—ಊರ್ವಶಿ ಮೊದಲಾದವರನ್ನು ಕಳುಹಿ ಜನಸಮುದಾಯವನ್ನು ಅಹಿಂಸೆಯಿಂದ ಚದುರಿಸಬೇಕೆಂದು ಬೇರೆ ಕೆಲವರು; ಶಿವನು ಅಟ್ಟಹಾಸದಿಂದ ಇಲ್ಲವೆ ಬ್ರಹ್ಮನು ನಿದ್ದೆಯ ಗೊರಕೆಗಳಿಂದ ಇಲ್ಲವೆ ವಿಷ್ಣುವು ಶಂಖವನ್ನೂದುವುದರಿಂದ ಗಲಭೆಯನ್ನು ದಬಾಯಿಸಬೇಕೆಂದು ಕೆಲವರು; ಹೀಗೆ ಅನೇಕ ದೇವತೆಗಳು ಅನೇಕ ತೆರನಾಗಿ ಸೂಚನೆಗಳನ್ನು ತಂದುದರಿಂದ ಅಧಿವೇಶನವೇ ಅಶಕ್ಯವಾಗಿ ಇಂದ್ರನು ಆಸ್ಥಾನ ಸಭೆಯನ್ನು ಮುಂದುವರಿಸಬೇಕಾಯಿತು. ಇಷ್ಟರಲ್ಲಿ ಇತ್ತ ಪಿತೃಗಳ ಕೋಲಾಹಲವು ಹೆಚ್ಚಿತು. ಭೂಲೋಕದಿಂದ ತಮಗೆ ಅನ್ನನೀರು ಬಾರದಿದ್ದಕ್ಕೆ ದೇವಲೋಕದ ವಾಹನ ಖಾತೆಯ ಅಯೋಗ್ಯತೆಯೆ ಕಾರಣವೆಂದು ಪಿತೃಗಳು ದೂರತೊಡಗಿ-

ದರು ವಾಹನ ಖಾತೆಯ ಮಂತ್ರಿಯಾದ ಸರ್ ಸಿಡಿಲುರಾಯ ಮತ್ತು ಕಾರ್ಯದರ್ಶಿಯಾದ ಮಿಸ್ಟರ ಮಿಂಚುನಾಥ ಇವರಿಬ್ಬರ ಕಡೆ ಪಿತೃಸಮುದಾಯವು ನುಗ್ಗಿತು. ಆದರೇನು? ಅವರಿಬ್ಬರೂ ಬೇಟೆಯಾಡಲು ಆಕಾಶಲೋಕಕ್ಕೆ ಹೋಗಿದ್ದಾರೆಂದು ತಿಳಿದು ಬಂದಿತು. ಕೂಡಲೆ ಪಿತೃಗಣವು ಇಂದ್ರನ ಕಡೆ ಧಾವಿಸಿತು. ಶಿಷ್ಟಮಂಡಳ ಬಂದರೆ ಕೇಳಿಕೊಳ್ಳುವನೆಂಬ ಆಶ್ವಾಸನದ ಜಾಣ್ಮೆಯಿಂದ ಇಂದ್ರನು ತಾತ್ಪೂರ್ತಿಕವಾಗಿ ಜನಸಮುದಾಯವನ್ನು ಶಾಂತಗೊಳಿಸಿದನು...........

ಸರ್ ಸಿಡಿಲುರಾಯ ಮತ್ತು ಮಿಸ್ಟರ ಮಿಂಚುನಾಥ ಇವರಿಬ್ಬರೂ ಕೂಡಲೇ ಭೂಲೋಕಕ್ಕಿಳಿದು ಪರಿಸ್ಥಿತಿಯನ್ನು ನೋಡಿಕೊಂಡು ಬರಬೇಕೆಂದು ಇಂದ್ರ ಮತ್ತು ಶಿಷ್ಟಮಂಡಳಗಳಲ್ಲಿ ಸಂಧಾನವಾಯಿತು. ಅಲ್ಲಿಯವರೆಗೆ ಯಾರಿಗೆ ಏಕಾದಶಿ ಇದೆಯೊ ಅವರದನ್ನಾಚರಿಸಬೇಕೆಂದೂ ಯಾರಿಗೆ ದ್ವಾದಶಿ ಇದೆಯೋ ಅವರು ಈ ಮುಂಚೆ ಬೆಳಗಿನಲ್ಲಿಯೆ ತಮ್ಮ ಊಟವಾಗಿದೆಯೆಂದು ತಿಳಿಯಬೇಕೆಂದೂ, ಮಿಕ್ಕವರು ಗೋಕುಲಾಷ್ಟಮಿ-ರಾಮನವಮಿ ರಮಝಾನಗಳನ್ನು ನೆನೆದುಕೊಂಡು ನಾಲಗೆಯನ್ನು ನೆನೆಯಿಸಬೇಕೆಂದೂ ಇಂದ್ರನು ತೀರ್ಪನ್ನು ಕೊಟ್ಟನು. ಇಷ್ಟರಲ್ಲಿಯೆ ಸರ್ ಸಿಡಿಲುರಾಯ ಮತ್ತು ಮಿಸ್ಟರ ಮಿಂಚುನಾಥ ಇವರು ತಮ್ಮ ಪ್ರವಾಸಕ್ಕೆ ಹೊರಡುವ ನಿರ್ಧಾರದಿಂದ ಬೇಟೆಯನ್ನು ತಡೆದೇ ಬಿಟ್ಟಿದ್ದರು! ಭಳಿರೇ ದೇವತೆಗಳೆ! ಛಾಪು ದೀನಬಾಂಧವರೆ! ಇಷ್ಟೊಂದು ಕಳಕಳಿ ನಿಮಗಿದೆ ಎಂದೆ ನಿಮ್ಮ ಲೋಕಕ್ಕೆ ಬರುವ ಮಾನವರ ಸಂಖ್ಯೆ ಹೆಚ್ಚುತ್ತಿರುವದಲ್ಲವೆ?

ಹೀಗಾಗಿ ಇತ್ತ ಭೂಮಿತಾಯಿ ದೇವಲೋಕಕ್ಕೆ ನಡೆದ ದಿನವೆ ಅತ್ತ ಸರ್ ಸಿಡಿಲುರಾಯ ತನ್ನ ಕಾರ್ಯದರ್ಶಿಯೊಂದಿಗೆ ಭೂಲೋಕಕ್ಕೆ ನಡೆದನು. ದಾರಿಯಲ್ಲಿ ಅವರವರ ಭೇಟಿಯಾಗಲಿಲ್ಲವೇ? ಆಯಿತು. ಹಾಗಾದರೆ ಭೂಲೋಕದ ಪರಿಸ್ಥಿತಿ ಇಷ್ಟು ಶೀಘ್ರವಾಗಿ ತಿಳಿದುದು ಅನ್ನವಿಲ್ಲದೆ ಬಳಲುತ್ತಿದ್ದ ಪಿತೃಗಳ ಸುದೈವವೆನಬಹುದೆ? ಎನಲಾಗದು. ವಾಚಕರೆ, ಎ-ನ-ಲಾ-ಗ-ದು! ಏಕೆನ್ನುವಿರಾ! ಸರ್ ಸಿಡಿಲುರಾಯನು ಭೂಮಿತಾಯನ್ನು ತಡೆಯಲಿಲ್ಲ, ಮಾತನಾಡಿಸಲೂ ಇಲ್ಲ. ಅದು ವೇಳೆಯ ಅಪವ್ಯಯ. ಇದಲ್ಲದೆ ಇಂದ್ರದೊರೆಯ ಆಜ್ಞೆಯ ಹೊರಗೆ ಹೋದಂತೆ. ಭೂಲೋಕವನ್ನು

ಸರ್ ಸಿಡಿಲುರಾಯನು ಪ್ರತ್ಯಕ್ಷ ಸಂದರ್ಶಿಸಬೇಕೆಂದು ಸಂಧಾನವಾಗಿರಲಿಲ್ಲವೇ? ಅಂದಿನ ಪ್ರಸಂಗದಲ್ಲಿ ಸಂಧಾನಕ್ಕಿಂತ ಅನ್ನದಾನವೆ ಮುಖ್ಯ ಎಂಬುದು ಹೊಣೆಗಾರಿಕೆಯ ಮಾತಿನಿಸದು. ಗುರಿ ಸಾಧಿಸಲಿ, ಸಾಧಿಸದಿರಲಿ, ಹಾಕಿ ಕೊಟ್ಟ ಕ್ರಮವನ್ನು ಎಂದಿಗೂ ಬಿಡಕೂಡದು ಎಂಬುದು ಕೈಗಾರಿಕೆಯ ದೊರೆತನದ ಮುಖ್ಯ ಲಕ್ಷಣ. ಈ ಮಾತನ್ನರಿತ ಸರ್ ಸಿಡಿಲುರಾಯನು ದಾರಿಯಲ್ಲಿ ದೈನ್ಯಾವಸ್ಥೆಯಿಂದ ದಿಕ್ಕೆಟ್ಟು ನಡೆದ ಆ ಹೆಂಗಸ(ಭೂಮಿತಾಯಿ)ನ್ನು ಕಣ್ಣೆತ್ತಿ ಕೂಡ ನೋಡದೆ ತನ್ನ ಕಾರ್ಯದರ್ಶಿಯೊಡನೆ ವಿಚಾರಣೆಕ್ರಮದ ಬಗ್ಗೆ ಮಾತನಾಡುತ್ತಾ ನಡೆದನು.

ಮಾಡಿದ ಕ್ರಮ ಒಂದು, ನಡೆವ ಕ್ರಮ ಮತ್ತೊಂದು ಎಂಬ ಮಾನವ ಲೋಕದ ಅನುಭವವು ಸರ್ ಸಿಡಿಲುರಾಯನಿಗೂ ಇದಿರುಗೊಂಡಿತು; ಇದನ್ನುಳಿದು ಬೇರೆ ಯಾವುದೂ (ವ್ಯಕ್ತಿಯಾಗಲಿ) ವಿಷಯವಾಗಲಿ ಇದಿರುಗೊಳ್ಳುವಂತಹ ಪ್ರಸಂಗವೆ ಅಲ್ಲಿರಲಿಲ್ಲ. ಯಾಕೆಂದರೆ ಭೂಲೋಕಕ್ಕೆ ಬಂದು ನೋಡಿದರೆ ಮಿತಿ ಮೀರಿದ ಗೊಂದಲ. ಗಾಸಿಗೊಳಿಸುವ ಗಲಭೆ ಅಲ್ಲಿ ನಡೆದಿದೆ. ಕಾಲಿಡಬೇಕೆಂದರೆ ಎಡೆ ಇಲ್ಲ, ಅಂತಹ ಸಂದಣಿ ಇಡಿಯ ಭೂಲೋಕವನ್ನೆ ಮುಸುಕಿದೆ. ಅಷ್ಟೇಕೆ? ಜನರ ಕೂಗಾಟವೆ ಆಕಾಶವನ್ನೆಲ್ಲ ತುಂಬಿಕೊಂಡುದುದರಿಂದ ಮುಂಚೆ ಭೂಲೋಕಕ್ಕೆ ಹತ್ತಿರ ಬರುವದೆ ಸರ್ ಸಿಡಿಲುರಾಯನಿಗೆ ಅಶಕ್ಯವಾಯಿತು. ಆಕಾಶವನ್ನು ತುಂಬಿದ ಕೂಗಾಟದ ತೆರೆಗಳನ್ನು ಮುನ್ನುಗ್ಗುತ್ತ ಈಜುತ್ತ ತೇಕುತ್ತ ಬರಬೇಕಾಯಿತು ಸರ್ ಸಿಡಿಲುರಾಯನಿಗೆ. ಮುಂದೆ ಕಾರ್ಯದರ್ಶಿಯಾದ ಮಿಸ್ಟರ ಮಿಂಚುನಾಥನು ದಾರಿಯನ್ನು ಮಾಡಿಕೊಟ್ಟದ್ದಿಲ್ಲವೆಂದರೆ ಸರ್ ಸಿಡಿಲುರಾಯನು ಆ ಕೂಗಾಟದ ಕತ್ತಲಲ್ಲಿ ಕೈ ಸೋತು ಕಂಗೆಡಬಹುದಾಗಿತ್ತು.

ಹತ್ತಿರ ಬಂದಂತೆ, ಕೂಗಾಟದ ಶಬ್ದಗಳನ್ನು ವಿಂಗಡಿಸಲು ಶಕ್ಯವಾದಂತೆ ಈ ಇಬ್ಬರು ದೇವಲೋಕದ ನಿರೀಕ್ಷಕರಿಗೆ ಗಲಭೆಯ ಕಲ್ಪನೆಯೂ ಕಾರಣವೂ ಸ್ಪಷ್ಟವಾಗತೊಡಗಿದವು. ಇಬ್ಬರೂ ಒಂದರೆ ನಿಮಿಷ ಆಶ್ಚರ್ಯಚಕಿತರಾದರು, ಅವಾಕ್ಕಾದರು. ಯಾಕೆಂದರೆ ಈ ಭೂಲೋಕದಲ್ಲಿಯಾದರೂ ಆಹಾರವನ್ನು ದೊರಕಿಸುವುದಕ್ಕಾಗಿಯೆ ನಡೆದಿದೆ ಗಲಭೆ! ತಾವಿನ್ನೂ ಅನ್ನಾನ್ನಗತಿಕರಾಗಿ ದೊಂಬಿ ಎಬ್ಬಿಸಿದ ಪಿತೃಗಣವನ್ನೆದುರಿಸುತ್ತಾ ದೇವ

ಲೋಕದಲ್ಲಿಯೆ ಉಳಿದುಕೊಂಡಿರುವೆವು—ಎಂದೂ ಒಂದು ನಿಮಿಷ ಇವರಿಬ್ಬರಿಗೆ ಸಂದೇಹವಾಯಿತು. ಆದರೆ ಇಡಿಯ ಭೂಮಿಯನ್ನು ತುಂಬಿದ ಅನ್ನರಾಶಿಯನ್ನು ನೋಡಿದಾಕ್ಷಣ ಆ ಸಂದೇಹ ಸರಿಯಿತು. ಅನ್ನದ ರಾಶಿಯೆ ಇವರಿಬ್ಬರ ಆಶ್ಚರ್ಯಕ್ಕೆ ಕಾರಣವಾಯಿತು. ಅನ್ನವಿಲ್ಲದಿದ್ದಕ್ಕಾಗಿ ದೇವಲೋಕದಲ್ಲಿ ದೊಂಬಿಯನ್ನೆಬ್ಬಿಸಿದೆ ಪಿತೃಗಣ! ಈ ಆಶ್ಚರ್ಯ ಮಾತ್ರ ಬಹಳೊತ್ತು ಅವರಿಬ್ಬರ ಮನಸ್ಸನ್ನು ಮುಗ್ಧಗೊಳಿಸಲಿಲ್ಲ. ಒಂದೇ ಸಮನೆ ಬರುತ್ತಿರುವ ಮಾನವರ ರಾಶಿಯನ್ನು ನೋಡಿದಂತೆ ಸರ್ ಸಿಡಿಲು ರಾಯನು ಪರಿಸ್ಥಿತಿಯನ್ನರಿತುಕೊಂಡನು. 'ನೋಡಿದೆಯಾ, ಮಿಸ್ಟರ್ ಮಿಂಚೂ! ಜನಗಣ ಒಂದೇ ಸಮನೆ ಹುಟ್ಟುತ್ತಲಿದೆ, ಬೆಳೆಯುತ್ತಲಿದೆ; ಆದರೆ ಒಂದು ಹುಳು ಕೂಡ ಸಾಯುವಲ್ಲದು! ಅದಕ್ಕಾಗಿ ದೊಂಬಿ' ಎಂದನು ಸರ್ ಸಿಡಿಲುರಾಯ. 'ಈ ತುಳಿದಾಟದಲ್ಲಾದರೂ ಸಾಯಲಿಕ್ಕಿಲ್ಲವೆ? ಎಂದು ಮಿಸ್ಟರ್ ಮಿಂಚುನಾಥನ ಪ್ರಶ್ನೆ. 'ಅಹುದಲ್ಲ! ತುಳಿದಾಟದಲ್ಲಿ ಕೂಸು ಕೂಡ ಸಾಯುವಲ್ಲದು! ಇದೇನು ಸೋಜಿಗ?' ಎಂದು ಸರ್ ಸಿಡಿಲುರಾಯನು ತಲೆ ತುರಿಸುವುದೊಂದೆ ತಡ, ಇಡಿಯ ಭೂಮಿಯನ್ನು ನಡುಗಿಸುವಂತೆ ತಟ್ ತ್ರಟ್ ತಡಡಡಡಡ ಎಂದು ಸಿಡಿಲೊಡೆಯಿತು. ಆಕಾಶವು ಚೂರುಚೂರಾಗಿ ನೀರು ಧಾರೆಯಾಯಿತು. ಅಕಸ್ಮಾತ್ತಾಗಿ ತನ್ನ ಪ್ರಭಾವ ಪ್ರಕಟವಾದುದರ ಪರಿಣಾಮವಾಗಿಯಾದರೂ ಕೆಲಜನರು ಸಾಯಬಹುದೆಂದು ಸರ್ ಸಿಡಿಲು ರಾಯನು ಎಣಿಕೆ ಹಾಕಿದನು; ನೋಡುವ ಕುತೂಹಲದಿಂದ ಮಿಸ್ಟರ ಮಿಂಚುನಾಥನು ಬೆಳಕನ್ನು ಕೆಡುಹಿದನು. ಆಶ್ಚರ್ಯ! ಯಾರೂ ಸತ್ತಿಲ್ಲ! ಯಾರೂ ಕೆಟ್ಟಿಲ್ಲ! ಕೆಟ್ಟಿದ್ದು ಅನ್ನರಾಶಿ ಮಾತ್ರ! ಅದಕ್ಕಾಗಿ ಜನಗಣವು ಇನ್ನೂ ಭೀಕರವಾಗಿ ಕ್ರೂರವಾಗಿ ಕಡಿದಾಟವನ್ನು ನಡೆಸಿದೆ! ಇಷ್ಟನ್ನು ನೋಡಿ, ಸಾಕೆಂದು ತಮ್ಮ ವರದಿಯನ್ನು ಇಂದ್ರನಿಗೆ ಮುಟ್ಟಿಸಲು ವೇಗವಾಗಿ ಇಬ್ಬರೂ ದೇವಲೋಕಕ್ಕೆ ಸಿಡಿದರು.

ಇತ್ತ ದೇವಲೋಕದಲ್ಲಿ ಪಿತೃಗಣವೆಲ್ಲ ಇಂದ್ರನ ಆಸ್ಥಾನದ ಹೊರ ಅಂಗಣದಲ್ಲಿ ನೆರೆದಿದೆ. ಆಗಾಗ ಕೂಗಿಕೊಳ್ಳುತ್ತಿದೆ. ಆಸ್ಥಾನದ ಒಳಗೆ ಇಂದ್ರನು ಸಿಂಹಾಸನದಲ್ಲಿ ವಿರಾಜಮಾನನಾಗಿದ್ದಾನೆ. ಅಷ್ಟದಿಕ್ಪಾಲಕರು, ಅಪ್ಸರೆಯರು, ಸ್ವರ್ಗನಿವಾಸಿಗಳಾದ ಋಷಿವರರು—ಸುತ್ತಲೂ ತಂತಮ್ಮ

ಆಸನಗಳಲ್ಲಿ ಮಂಡಿಸಿದ್ದಾರೆ. ಪ್ರತಿಯೊಬ್ಬನ ಮುಖದಲ್ಲೂ ಅತ್ಯಂತ ವಿಸ್ಮಯದ ಭಯಮಿಶ್ರಿತ ಕಳೆ. ತಮ್ಮ ಉಸಿರು ಕೂಡ ತಡೆದವರಷ್ಟು ಸ್ತಬ್ಧ ರಾಗಿ ಕುಳಿತಿದ್ದಾರೆ. ಆಸ್ಥಾನದ ಮಧ್ಯದಲ್ಲಿ ಕಣ್ಣೀರು ಧಾರೆಯಾಗಿ, ತಲೆ ಗೂದಲು ಅಸ್ತವ್ಯಸ್ತವಾಗಿ, ಉಟ್ಟ ವಸ್ತ್ರ ಚಿಂದಿ ದೂಳಿಯಾಗಿ ಹರಿದುಬಿದ್ದ ಅಬಲೆಯೊಬ್ಬಳು ಮೊರೆಯಿಡುವ ಮುಖಮುದ್ರೆಯಿಂದ ನಿಂತಿದ್ದಾಳೆ. ಪಾಪ! ಅವಳೇ ನಮ್ಮ ಭೂಮಿತಾಯಿ. ತನ್ನ ಗೋಳನ್ನೆಲ್ಲಾ ತೋಡಿ ಕೊಂಡಿದ್ದಾಳೆ. 'ನಿಜವಿದ್ದುದನ್ನರಿತುಕೊಳ್ಳಲು ನನ್ನ ಮಂತ್ರಿಗಳೇ ಹೋಗಿದ್ದಾರೆ. ಅವರು ವರದಿಯನ್ನು ಒಪ್ಪಿಸಿದ ತರುವಾಯ ಯೋಗ್ಯ ವಾದುದನ್ನು ಮಾಡುವೆ' ಎಂದು ಇಂದ್ರನು ಹೇಳಿದ್ದಾನೆ. ಮುಂದೆ ಏನು ಮಾಡಬೇಕೆಂಬುದು ಯಾರಿಗೂ ತಿಳಿಯದಂತಾಗಿ ಆಸ್ಥಾನದಲ್ಲಿ ಸ್ತಬ್ಧತೆಯ ಪ್ರತಿಧ್ವನಿ ಮೂಡಿದಂತಾಗಿದೆ. ಭೂಲೋಕಕ್ಕೆ ಹೋದವರಿಬ್ಬರೂ ಕ್ಷಣದಲ್ಲಿ ಮರಳಿ ಬಂದರೆ—ಎಂದು ಯೋಚಿಸುವಷ್ಟರಲ್ಲಿ ಸರ್ ಸಿಡಿಲುರಾಯನೂ ಮಿಸ್ಟರ ಮಿಂಚುನಾಥನೂ ಬಂದೇಬಿಟ್ಟರು. ಇಂದ್ರನು ಉಸಿರೆಳೆಯುವಷ್ಟ ರಲ್ಲಿ ತಮ್ಮ ಸೋಜಿಗದ ವರದಿಯನ್ನೊಪ್ಪಿಸಿದರು.

ಹೊರಗೆ ಒಂದೇಸವನೆ ಕೂಗನ್ನೆಬ್ಬಿಸಿದ ಪಿತೃಗಣವನ್ನು ಶಾಂತಗೊ-ಳಿಸುವುದು ಇಂದ್ರನ ಮೊದಲ ಕೆಲಸವಾಯಿತು. ಭೂಲೋಕದ ಸ್ಥಿತಿಯನ್ನು ಬಣ್ಣಿಸಿ, ಅಲ್ಲಿಯ ಜನರಿಗೆ ತಮಗೆ ಆಹಾರ ದೊರಕಿಸುವ ಹೋರಾಟವೇ ಮುಖ್ಯವಾದುದರಿಂದ ಇಲ್ಲಿ ಪಿತೃಗಳಿಗೆ ಅನ್ನದ ಅಭಾವವಾಗಿದೆಯೆಂದೂ ಒಂದೆರಡು ದಿವಸಗಳಲ್ಲಿ ಪರಿಸ್ಥಿತಿಯನ್ನು ವಶದಲ್ಲಿ ತಂದುಕೊಳ್ಳುವನೆಂದೂ ಹಾಗೂ ಹೀಗೂ ಇಂದ್ರನು ತಾತ್ಕಾಲಿಕವಾಗಿ ಆ ನಿರಾಹಾರಿಗಳ ಗುಂಪನ್ನು ಶಾಂತ ರೀತಿಯಿಂದ ವಿಸರ್ಜಿಸಿದನು. ಆ ಮೇಲೆ ತನ್ನ ಮಂತ್ರಿಗಳ ಅವ-ಸರದ ಸಭೆಯನ್ನು ಕರೆದು ಆಲೋಚನೆಯನ್ನು ನಡೆಸಿದನು. ಮೊದಲು ಪ್ರತಿಯೊಬ್ಬನೂ ಒಂದೇ ಒಂದು ಅಭಿಪ್ರಾಯಕ್ಕಾಗಿ ಹಟ ತೊಟ್ಟನು—ಭೂಲೋಕದಲ್ಲಿ ಕೂಡಲೆ ಜನಸಂಖ್ಯೆಯು ಕಡಮೆಯಾಗಲೇಬೇಕೆಂದು. ಯಮರಾಯನನ್ನು ಕರೆಸಿಕೊಂಡರು. ತನ್ನಲ್ಲಿ ಲೆಕ್ಕವೇ ತಪ್ಪಿದ್ದರಿಂದ ಸಾಯಬೇಕಾದವರು ಯಾರು ಎಂಬುದರ ನಿರ್ಣಯವನ್ನು ಕೊಡುವುದು ಶಕ್ಯವಿಲ್ಲ ಎಂದು ಕಂಡು ಮಾನವರು ತಮ್ಮನ್ನು ತಾವೇ ಕೊಲ್ಲುವಂತೆ

ಇಂದ್ರನೂ ಅವನ ಮಂತ್ರಿಮಂಡಲವೂ ಉಪಾಯವನ್ನು ಶೋಧಿಸತೊಡಗಿದರು. ಯುದ್ಧ ಖಾತೆಯ ಮಂತ್ರಿಯಾದ ವಜ್ರಾಯುಧನು ತನ್ನ ಅನುಭವವನ್ನು ಹೇಳಿದನು. ಮಾನವಲೋಕದಲ್ಲಿ ಎಷ್ಟೊಂದು ಸಲ ಯುದ್ಧವನ್ನು ಹರಡಿದರೂ ಮತ್ತೆ ಮತ್ತೆ ಅದೇ ಜನಾಂಗಗಳೆ ಯುದ್ಧ ಮಾಡುತ್ತಲಿದ್ದುದರಿಂದ ಸದ್ಯದ ಪ್ರಸಂಗದಲ್ಲಿ ಯುದ್ಧದಿಂದ ಯೋಗ್ಯ ಜನರಾಗಲಿ ಸಾಕಷ್ಟು ಜನರಾಗಲಿ ಸಾಯಲಿಕ್ಕಿಲ್ಲ ಎಂದು ವಜ್ರಾಯುಧನ ಸಂದೇಹ. ಆದರೆ ಇತ್ತ ಯುದ್ಧ ನಡೆದ ಕಾಲಕ್ಕೆ ಮಿಕ್ಕವರು ಮತ್ತೊಂದು ರೀತಿಯಲ್ಲಿ ಸಾಯುವಂತೆ ಮಾಡಿದರೆ ಒಳಿತಾಗಲಿಕ್ಕಿಲ್ಲವೆ ಎಂಬ ಪ್ರಶ್ನೆ ಎದ್ದಿತು. ಆಗ ಆರೋಗ್ಯ ಖಾತೆಯ ಮಂತ್ರಿಯಾದ ಸಾವಿರಗಣ್ಣು ಶಾಸ್ತ್ರಿಯು ತನ್ನ ಸಂದೇಹವನ್ನು ಮುಂದೆ ಮಾಡಿದನು. 'ಯುದ್ಧವನ್ನಾಡದ ಮನೆಹೇಡಿಗಳಿಗೆ ಗಂಟುಬೇನೆ, ಸಿಡುಬು, ಮಾರಿಬೇನೆ, ವಿಷಮಜ್ವರ ಮೊದಲಾದ ಮದ್ದುಗಳನ್ನು ಅನೇಕ ಸಲ ಕಳುಹಿದ್ದೇನೆ. ಮುಂಚೆ ಒಂದೆರಡು ಸಲ ಜನ ಸತ್ತುದೂ ಉಂಟು. ಆದರೆ ಮೇಲಿಂದ ಮೇಲೆ ಬರುವ ಬೇನೆಗಳೊಡನೆ ಈ ಜನರು ಸಖ್ಯವನ್ನು ಬೆಳೆಯಿಸಿ ಈಗ ಸಾಯುವುದೇ ಇಲ್ಲ! ಇಂತಹರಿಗೆ ಮಾಡುವುದೇನು?' ಎಂದನು ಶಾಸ್ತ್ರಿ. ಸಭೆ ನಡೆದಂತೆ ಹೀಗೆ ಸಂದೇಹಗಳು ಬೆಳೆದವಲ್ಲದೆ ನಿರ್ಣಯ ದೊರೆಯದಂತಾಯ್ತು. ಇದುವರೆಗೆ ತೂಕಡಿಸುತ್ತಿದ್ದ ಯಮರಾಯನು ತಟ್ಟನೆ ಹೊಳೆದ ಒಂದು ಯೋಚನೆಗಾಗಿ ಎಚ್ಚತ್ತನು. ತನ್ನ ಯೋಚನೆಯಿಂದ ಮೊದಲು ದೇವಲೋಕದಿಂದ ಒಂದು ಪೀಡೆ ತಪ್ಪುವುದೆಂದು ಅವನ ಎಣಿಕೆ. ಆ ಯೋಚನೆ ಹೀಗೆ. ಭೂಲೋಕದ ಜನರ ಲೆಕ್ಕವಿಲ್ಲದಿದ್ದರೂ ಸ್ವರ್ಗಲೋಕದಲ್ಲಿದ್ದ ಪಿತೃಗಳ ಲೆಕ್ಕವಿದೆಯಷ್ಟೆ? ಯಾರಾರ ಪುಣ್ಯ ಸರಿದಿದಿಯೊ, ಇಲ್ಲವೆ ಸರಿಯುವುದರಲ್ಲಿದೆಯೊ ಅವರನ್ನೆಲ್ಲ ಭೂಮಿಗೆ ಇಳಿಸಿಬಿಟ್ಟರಾಯಿತಲ್ಲಾ? ಅಂದರೆ ದೇವಲೋಕದ ದೊಂಬಿ ಶಾಂತವಾದಂತಾಯಿತು. ಇನ್ನು ಇದರಿಂದ ಭೂಮಿತಾಯಿಯ ಭಾರ ಕಡಿಮೆಯಾಗದೆ ಇನ್ನಷ್ಟು ಬೆಳೆಯುವುದೆಂದು ಕೆಲವರು ಅಪೇಕ್ಷಿಸಬಹುದಾಗಿದೆ. ಅದಕ್ಕೆ ಯಮರಾಯನು ಒಂದು ಸಮಾಧಾನವನ್ನು ಕೊಟ್ಟನು ಅದೇನೆಂದರೆ ಕೆಲವು ದಿನಗಳವರೆಗೆ ಭೂಮಿತಾಯಿಯು ತನ್ನ ತವರುಮನೆಯಾದ ನರಕಕ್ಕೆ ಹೋಗಬೇಕು.

ಈ ನಿರ್ಣಯವೆ ಕೊನೆಗೆ ಸ್ವೀಕೃತವಾಯಿತು. ಪಿತೃಗಣವು ಭೂಮಿ ಗಿಳಿಯಿತು. ಅನ್ನದ ಹೋರಾಟದಲ್ಲಿ ನುಗ್ಗಿತು. ಅರ್ಥಾತ್, ದೇವ ಲೋಕದಿಂದ ಬಂದವರ ಕಸುವು ಹೆಚ್ಚಾಗಿ ಭೂಲೋಕನಿವಾಸಿಗಳು ಕ್ರಮೇಣ ಶಕ್ತಿ ಸಾಲದೆ ನರಳಾಡುತ್ತ ಬಿದ್ದುಕೊಂಡರು. ಪಾಪ! ಪಿತೃ ಗಣವೂ ಮುಂದೆ ಪೇಚಿನಲ್ಲಿ ಸಿಕ್ಕಿಕೊಂಡಿತು. ಯಾಕೆಂದರೆ ಇದು ವರೆಗೆ ದೇವಲೋಕದಲ್ಲಿ ಇನ್ನೊಬ್ಬರ ಕೈಯಿಂದ ತುತ್ತನ್ನು ತರಿಸಿಕೊಳ್ಳುವ ಸ್ವಭಾವ ಅವರದಾದ್ದರಿಂದ ಪಿತೃಗಳು ರಾಶಿರಾಶಿಯಾಗಿ ಬಿದ್ದ ಅನ್ನವನ್ನು ತಿನ್ನದೆ ಹೋದರು; ಕೊನೆಗೆ ನಿಶ್ಪ್ರಾಣರಾಗಿ ಬಿದ್ದುಕೊಂಡರು ಹೀಗೆ ಹೋರಾಟ ಅಡಗಿ ಶಾಂತತೆ ಹಬ್ಬಿದುದರಿಂದ ಭಾರ ಕಡಮೆ ಎನಿಸಿ ಭೂಮಿ ತಾಯಿ ಮತ್ತೆ ಬಂದು ನೆಲಸಿದಳು. ಎಲ್ಲರಿಗೂ ಹೀಗೆ ಶಾಂತಿ—ಸುಖಗಳು ದೊರೆತವು. ಇದೆಲ್ಲಕ್ಕೆ ತನ್ನ ಬುದ್ಧಿಮತ್ತೆಯಿಂದ ಕಾರಣನಾದ ಯಮರಾಯನನ್ನು ದೇವತೆ ಗಳೆಲ್ಲ ಸಿಂಗರಿಸಿದ ಕೋಣನ ಮೇಲೆ ಮೆರೆಯಿಸಿದರು. ಆ ಮೆರವಣಿಗೆಯ ವೈಭವವನ್ನು ನೋಡಿ ಆನಂದಪಟ್ಟರು. ಇಬ್ಬರಿಗೆ ಮಾತ್ರ ಆನಂದವಾಗ ಲಿಲ್ಲ; ನಮ್ಮ ಚಿತ್ರಪ್ಪನಿಗೆ ಮತ್ತು ಗುಪ್ತಣ್ಣನಿಗೆ: ಅವರಿಗೆ ಮೆರವಣಿಗೆ ಕಾಣಲೇ ಇಲ್ಲ. ಯಾಕೆಂದರೆ ಅವರ ಬೆನ್ನು ಇನ್ನೂ ಬಾಗಿತ್ತು.

---

## ಜನ್ಮಾಂತರದ ಜಂಭ!

ಹೊಟ್ಟೆಯನ್ನು ಹೊರೆದುಕೊಳ್ಳುವುದಕ್ಕಾಗಿ ನಾನೊಂದು ಶಿಕ್ಷಣ ಸಂಸ್ಥೆಯಲ್ಲಿ ಸಂಸ್ಕೃತದ ಅಧ್ಯಾಪಕನಾಗಿದ್ದೇನೆ. ಈ ಮಾತನ್ನು ಹೇಳುವ ಸಂದರ್ಭವೆಂದರೆ ಆಗಾಗ ಕೆಲವು ಸಂಸ್ಕೃತ ಸೂಕ್ತಗಳು ನನ್ನ ಮನಸ್ಸನ್ನು ಹಿಡಿದು ವಿಚಿತ್ರವಾದ ಅನುಭವಗಳನ್ನು ಒದಗಿಸುತ್ತಿವೆ. ಅಂತಹದೊಂದು ಅನುಭವವನ್ನು ತಮ್ಮ ಮುಂದಿಡುವವನಿದ್ದೇನೆ. ಕಾಳಿದಾಸನ ಒಂದು ಮಾತು, ಮನೋ ಹಿ ಜನ್ಮಾಂತರಸಂಗತಿಜ್ಞಂ, ಎಂದು; ಮನಸ್ಸಿಗೆ ಮತ್ತೊಂದು ಜನ್ಮದ ಸಂಗತಿ ತಿಳಿಯಬಲ್ಲದು, ಎಂದು. ನನಗೆ ದಿಗಿಲು ಬಿದ್ದಿತು; ಮೊದಲೇ ರೇಶನ್ ಹೌಸದಿಂದ ತಂದು ತಿಂದ ಕೂಳು ಹೊಟ್ಟೆಯಲ್ಲಿ; ಅದೂ ಹೊಟ್ಟೆ ತುಂಬುವಷ್ಟಲ್ಲ; ಮೇಲೆ ಇಂತಹ ವಾಕ್ಯ. ಇದರ ಅರ್ಥವೇನು ಎಂದು

ಕಣ್ಣು ಮುಚ್ಚಬೇಕೆಂದರೆ ಶಕ್ಯವಾಗದೆ ಹಾಗೆಯೆ ದಿಗಿಲು-ಭುಗಿಲಾಗಿ ಕುಳಿತೆ. 'ಮತ್ತೊಂದು ಜನ್ಮ' ಎಂದರೆ ಮುಂದಿನ ಜನ್ಮವಿರಬಹುದೆ? ಮುಂದಿನ ಜನ್ಮದಲ್ಲಿ ನಾನು ಏನೇನು ಮಾಡಿದ್ದೇನೆ ಎಂಬುದನ್ನು ಇಂದು ನನ್ನ ಮನಸ್ಸು-ಥೆ. ಈ ವಾಕ್ಯದ ವ್ಯಾಕರಣ ಕೂಡ ಸರಿಯಾಗಿಲ್ಲ, ವಿಚಾರ ಹೋಗಲಿ ಎಂದು ಮಗ್ಗುಲ ಬದಲಿಸಿದೆ. ಹೊಳೆಯಿತು! 'ಜನ್ಮಾಂತರ' ಎಂದರೆ ಹಿಂದಿನದೆ ಜನ್ಮ! ಕೂಡಲೆ ಒಳಗೆ ಪ್ರಕಾಶ ದೇದೀಪ್ಯಮಾನವಾಯಿತು! ದೃಷ್ಟಿ ಅನಂತಪಾರದೃಶ್ವಾ ಎನಿಸಿತು! ಹಿಂದಿನ ನನ್ನ ಜನ್ಮದ ಚರಿತ್ರವೆ ಮುಂದೆ ನಿಂತಿತು.

ಅದು ಯಾವ ಇಸ್ವಿ ಎಂಬುದನ್ನು ಮಾತ್ರ ನಾನು ಲಕ್ಷ್ಯಗೊಟ್ಟು ನೋಡಲಿಲ್ಲ. ಆದರೆ ಇದೇ ಕಾಲದ ೫೦-೬೦ ವರ್ಷಗಳ ಮುಂಚಿನ ಮಾತು ಎಂದು ಮಾತ್ರ ಧೈರ್ಯವಾಗಿ ಹೇಳಬಲ್ಲೆ. ಯಾಕಂದರೆ ಆಗ ನಾನು ಕರ್ನಾಟಕತ್ವದ ಏಕಮೇವಾದ್ವಿತೀಯ ಮುಂದಾಳಾಗಿದ್ದೆ, ಅಥವಾ— ಸತ್ಯವನ್ನನುಸರಿಸಿ ಹೇಳುವುದಾದರೆ ಅಖಂಡ ಕರ್ನಾಟಕತ್ವದ ಕಲ್ಪನೆಯನ್ನು ಹರಡಿದ ಆದ್ಯ ಆಚಾರ್ಯ ನಾನಾಗಿದ್ದೆ ಎಂದು ಹೇಳಬಹುದು. ಯಾಕೆಂದರೆ ನನ್ನ ಕಣ್ಣೆದುರು ಸುಳಿದ ಹಿಂದಿನ ಜನ್ಮದ ನನ್ನ ಕತೆಯ ಕಾಲದಲ್ಲಿ ಕರ್ನಾಟಕವು ಬಡ ಭಾರತೀಯನು ಉಡುವ ವಸ್ತ್ರದಂತೆ- ಮಾನವೊಂದನ್ನಿಟ್ಟುಕೊಂಡು-ಚಿಂದಿ ಚಿಂದಿಯಾಗಿತ್ತು. ಆಗಿನ ಕಾಲದ ಕನ್ನಡಿಗರೆಲ್ಲ ಬೇರೆ ಬೇರೆ ಜನರಿಗೆ ಕೈ ಎತ್ತಿ ಮೊರೆ ಇಡುತ್ತಿದ್ದರು. ಆಗಾಗ 'ದೇವರೆ, ಅವತಾರವನ್ನಾದರೂ ತಾಳಬಾರದೆ?'—ಎನ್ನುವವರಂತೆ ಆಕಾಶವನ್ನು ನೋಡಿ ನಿಟ್ಟುಸಿರನ್ನು ಬಿಡುತ್ತಿದ್ದರು. ಆ ಚಿಂದಿಯಾದ ವಸ್ತ್ರವನ್ನು ಒಂದುಗೂಡಿಸುವ ನಾಯಕನಿಗಾಗಿ ಹಂಬಲಿಸುತ್ತಿದ್ದರು. ಆ ಕಾಲದಲ್ಲಿ ಪರಮಾತ್ಮನ ಸಂದೇಶವನ್ನು, ದೇಶದ ಭವಿತವ್ಯತೆಯನ್ನು ಮುಂದುವರಿಸುವ ಪ್ರವಾಹಪತಿತ ಕರ್ಮ ನನ್ನ (ಹಿಂದಿನ ಜನ್ಮದ ಮಾತಿದು, ಲಕ್ಷ್ಯದಲ್ಲಿರಲಿ) ಭಾಗ್ಯಕ್ಕೆ ಬಂದಿತು. ಚಿಂದಿ ಚಿಂದಿಯಾದ ವಸ್ತ್ರವನ್ನು ಒಂದುಗೂಡಿಸುವಂತೆ ಹೊಲಿಯುವ ಸೂತ್ರ ನಾನಾದೆ. ಅಥವಾ ಸಿಡಿದು ಬಿದ್ದ ಕನ್ನಡಮಣಿಗಳನ್ನು ಹಾರವಾಗಿ ಪೋಣಿಸುವ ಸೂತ್ರ ನಾನಾದೆ— ಎಂದು ಹೇಳಬಹುದು.

ಆಗಿನ ನನ್ನ ಜೀವನದ ಒಂದೊಂದು ಚಿತ್ರವನ್ನೂ ನನ್ನ ಮನಸ್ಸು ಕಂಡಿತು. 'ಏಕೀಕರಣ' ಎಂಬುದು ನನ್ನ ಮಂತ್ರ; 'ಯಾಕೀಕರಣ'

ಎಂದು ಎನ್ನ ತಪಸ್ಸು. ಎಂದರೆ ಈ ಕರಣ (ಇಂದ್ರಿಯ)ಗಳಾದರೂ ಯಾಕೆ ಎಂಬ ನಿಸ್ವಾರ್ಥ ಬುದ್ಧಿಯಿಂದ ನಾನು ಕಷ್ಟಬಟ್ಟೆ. ಕಷ್ಟವೆಂದರೆ ಅದೆಂತ-ಹುದು! ಇಡಿಯ ಕನ್ನಡ ಜಿಲ್ಲೆಗಳನ್ನು ಒಬ್ಬನೇ ಸಂಚರಿಸಿದೆ. ನಿಜ; ಒಬ್ಬಿಬ್ಬ ಕಾರ್ಯದರ್ಶಿಗಳೂ, ಮೂರು—ನಾಲ್ಕು ಸೇವಕರೂ ನನ್ನ ಜೊತೆ-ಯಲ್ಲಿದ್ದರು. ಆದರೂ ಒಬ್ಬನೇ ಸಂಚರಿಸಿದೆ ಎನಬಹುದಾಗಿದೆ. ಯಾಕೆಂದರೆ ಸಂಚಾರದ ಮುಖ್ಯ ಕಾರ್ಯವನ್ನು, ಏಕೀಕರಣದ ಪ್ರಚಾರವನ್ನು, ಕನ್ನಡ-ತನದ ಜಾಗೃತಿಯನ್ನು ಹೊಡೆದೆಬ್ಬಿಸಲು- ಚೇತರಿಸಲು ಭಾಷಣವನ್ನು ಮಾಡುವವ ನಾನೊಬ್ಬನೇ! ಇಷ್ಟೇಕೆ? ಮೇಲೆ ಕಾಣಿಸಿದ ಪರಿವಾರವು ನನ್ನೊಡನೆಯೆ ಇಡಿಯ ದೇಶವನ್ನು ಸುತ್ತರಿದರೂ ಕಷ್ಟವನ್ನು ಪಟ್ಟವನೂ ನಾನೊಬ್ಬನೆ ಎಂದು ಹೇಳಬಹುದು. ಪರಿವಾರದವರೆಲ್ಲ ಕಾಲ್ನಡಿಗೆಯಿಂದಲೆ ಸಂಚಾರವನ್ನು ಸಾಗಿಸುತ್ತಿದ್ದರು; ಆದ್ದರಿಂದ ಅವರಿಗೆ ಯಾವ ತೊಂದ-ರೆಯೂ ಆಗಲಿಲ್ಲ. ಸಹಜವಲ್ಲವೆ? ಕಾಲ್ಗಳು ನಡೆಯುವುದಕ್ಕೆ ಎಂದು ಪರಮಾತ್ಮನೆ ವ್ಯವಸ್ಥೆಯನ್ನು ಮಾಡಿದ್ದಾನೆ; ಕಾಲ್ನಡಿಗೆಯು ಸ್ವಭಾವ-ನಿಯತ ಕರ್ಮವಾದುದರಿಂದ ನನ್ನ ಹಿಮ್ಮೇಳದವರಿಗೆ ಯಾವ ತೊಂದರೆಯೂ ಇಲ್ಲವಾಯಿತು. ಆದರೆ ನನ್ನ ಹಣೆಬರಹವನ್ನು ನೋಡಿರಿ! ಯಾವಾಗಲೂ ಕುದುರೆಯ ಮೇಲೆ, ಇಲ್ಲವಾದರೆ ಚಕ್ಕಡಿಯಲ್ಲಿ ಕುಳಿತು—ಹೀಗೆಯೆ ನಾನು ಪ್ರವಾಸ ಮಾಡಬೇಕಾಯಿತು. ತೊಡೆ-ಬೇನೆ, ಬೆನ್ನು ಬಾಗುವಿಕೆ, ತಲೆ ತೂಗುವಿಕೆ, ಕುಳಿತಲ್ಲಿಯೆ ಜುಮ್ಮೆನ್ನಿಸುವಿಕೆ- ಇಂತಹ ಅನೇಕ ದೈಹಿಕ ಅನಾರೋಗ್ಯಗಳನ್ನು ನಾನು ಎದುರಿಸಬೇಕಾಯಿತು. ಆದರೇನು? ಕನ್ನಡ ತಾಯಸೇವೆಗಾಗಿ ಬಂದದ್ದನ್ನೆಲ್ಲ ಕಂಯ್ ಎನ್ನದೆ ಕಿಸೆಯಲ್ಲಿ ಹಾಕಿಕೊಳ್ಳ-ಬೇಕಲ್ಲವೆ? [ಹಿಂದಿನ ಜನ್ಮದಲ್ಲಿ ನಾನು ಹಾಗೆ ಮಾಡಿದ್ದಿಲ್ಲವೆಂದರೆ ಇಂದಿನ ಕಾಲದಲ್ಲಿ ಕನ್ನಡದ ಸೇವೆ ಇಷ್ಟೊಂದು ಲೋಕಪ್ರಿಯವಾಗುತ್ತಿತ್ತೆ— ಎಂದು ಈಗ ನನಗೆ ಸಂದೇಹ]. ಅಂತೂ ನನ್ನ ಪಾದಧೂಳಿಯ ಯೋಗವು ಅವಾವಕ್ಕಿದ್ದಿತೊ ಅವೆಲ್ಲ ಹಳ್ಳಿ—ನಗರಗಳನ್ನು ಬಿಟ್ಟುಬಿಡದೆ ಸಂಚರಿಸಿದೆ. ಅದೊಂದೆ ಸಂಗತಿಯಿಂದ ಏಕೀಕರಣವು ಸಾಧಿಸಿತೆನಬಹುದು. ಯಾಕೆಂದರೆ ಇಡಿಯ ಕನ್ನಡ ಜಿಲ್ಲೆಗಳಿಗೆ ನಾನೊಬ್ಬನೆ— ಏಕೈಕನಾದ— ಮುಂದಾಳಾದೆ. ಬೇರೆ ಬೇರೆ ಆಧಿಪತ್ಯಗಳಿಗಾಗಿ ದುಡಿಯುತ್ತಿದ್ದ ಕನ್ನಡಿಗರ ಕೈಗಳು ನನ್ನ

ಭಾಷಣಕ್ಕೆ ಚಪ್ಪಾಳೆ ತಟ್ಟೆ ಒಂದುಗೂಡಿದುವು. ಪ್ರಾದೇಶಿಕವಾಗಿ ಜಿಲ್ಲೆಗಳು ಇದ್ದಂತೆ ಉಳಿದರೂ ನನ್ನ ಪಾದಧೂಳಿಯಿಂದ ಕನ್ನಡ ಭೂಮಿ ಒಂದೆನಿಸಿತು.

ಅಥವಾ—೫೦ ವರ್ಷಗಳ ತರುವಾಯದ ಇಂದಿನ ನಿಮಗೆ ಆ ದಿನಗಳ ಕಷ್ಟನಷ್ಟಗಳೆ ತಿಳಿಯಲಿಕ್ಕಿಲ್ಲ. ಅದಕಾಗಿ ಒಂದೆರಡು ಸಂಗತಿಗಳನ್ನು ನನ್ನ ಮನಸಸ್ಸು ಕಂಡಂತೆಯೆ ವಿವರಿಸಿ ಹೇಳುವೆ. ಮೊದಲು ಉಪನ್ಯಾಸದ ವಿಷಯ. ಸಾಮಾನ್ಯವಾಗಿ ಉಪನ್ಯಾಸಗಳ ಕಲ್ಪನೆಯೆ ಜನರಿಗಿರಲಿಲ್ಲ. ಇದೇನೊ ಒಂದು ವಿಲಾಯತಿಯ ವಸ್ತು, ಇದರ ಗೊಡವೆ ನಮಗೆ ಬೇಡ— ಎಂಬಂತೆ ಜನರು ದೂರದೂರವಾಗಿಯೆ ಉಳಿಯುತ್ತಿದ್ದರು. ಅಂತಹ ಹಿಂದುಳಿದ ಜನರನ್ನು ಮುಂದೆ ತರುವುದು ಹಿಂದಿನ ಜನ್ಮದ ನನ್ನ ಮೊದಲ ಕೆಲಸವಾಗಿತ್ತು. ಉಪನ್ಯಾಸ ಪದ್ಧತಿಗೆ ಅವರ ಮನಸನ್ನು ಒಲಿಸುವುದಕ್ಕಾಗಿ ನಾನು ವಿಶಿಷ್ಟವಾದ ಧೋರಣೆಯನ್ನೆ ತಾಳಿದೆನು; ಇದು ವಿಲಾಯತಿಯ ವಸ್ತುವಲ್ಲ ಎಂದು ತೋರಿಸಲು ಉಪನ್ಯಾಸವನ್ನು ಹರಿಕಥೆಯ ಶೈಲಿಯಲ್ಲಿ ಇಳಿಸುತ್ತಿದ್ದೆನು; ಪ್ರಗತಿಯೆ ನನ್ನ ಉಪನ್ಯಾಸಗಳ ನಿಜವಾದ ಪ್ರಚಾರ ವಿಷಯವಾಗಿದ್ದರೂ ಬಂದವರನ್ನು ಕೊನೆಯವರೆಗೆ ಹಿಡಿದು ಕೂಡಿಸುವುದಕ್ಕಾಗಿ ಅವರಿಗೆ ರುಚಿಸುವ ಮಾತುಗಳನ್ನೆ ಹೇಳುತ್ತಿದ್ದೆನು. ಹೀಗೆ ಮಾಡುವುದು ಬಯಲಡಂಭತನ ಎಂದು ಮೂಗು ಏರಿಸಬೇಡಿರಿ. ಲೋಕ ಸಂಗ್ರಹದ ಕಾರ್ಯವದು. ಲೋಕಸಂಗ್ರಹಕ್ಕಾಗಿ ಧರ್ಮರಾಜನು ಕೂಡ 'ಅಶ್ವತ್ಥಾಮಾ ಹತಃ' ಎಂದು ಕೂಗಿ, 'ಗಜಃ' ಎಂದು ಉಗುಳ್ನುಂಗಿದ್ದನ್ನು ಮರೆಯಬೇಡಿರಿ: ನನಗೆ ೩–೪ ಸೇವಕರು ಎಂದು ಹೇಳಿದೆನಲ್ಲ. ಆ ಸಡಗರ ನನ್ನ ಸ್ವಂತದ ಸೇವೆಗಾಗಿ ಎಂದು ತಿಳಿದಿರುವಿರಾ? ಖಂಡಿತವಾಗಿಯೂ ಅಲ್ಲ! ಆ ಸೇವಕರೆಲ್ಲ ಸಭೆಯ ನಾಲ್ಕೂ ಮೂಲೆಗಳಲ್ಲಿ ನಿಂತು ಆಗಾಗ ಚಪ್ಪಾಳೆ ತಟ್ಟೆ ಸೇರಿದ ಜನಕ್ಕೆ ಉಪನ್ಯಾಸದಲ್ಲಿ ಆಸಕ್ತಿ ಹುಟ್ಟುವಂತೆ ಮಾಡುವುದಕ್ಕೆ. ಉಪನ್ಯಾಸಗಳ ವಿಷಯವಾಗಿ ಇನ್ನೂ ಒಂದು ಮಹತ್ವದ ಮಾತನ್ನು ಹೇಳಲೇಬೇಕು. ಇದು ೫೦-೬೦ ವರ್ಷಗಳ ಹಿಂದಿನ ಮಾತು ಎಂಬುದನ್ನು ಲಕ್ಷ್ಯದಲ್ಲಿಡಿರಿ. ಆಗ ನಾನು ಕನ್ನಡ ಜಿಲ್ಲೆಗಳ ಮೂಲೆ ಮೂಲೆಗೂ ಹೋಗಿ ಮಾತನಾಡಿದರೆ ನನ್ನ ಮಾತು ಎಲ್ಲರಿಗೂ ತಿಳಿಯುವುದೆಂಬ ಭರವಸೆ ಹೇಗೆ? ಅದಕಾಗಿ ಯಾವ ಜಿಲ್ಲೆಯಲ್ಲಿ ಮಾತನಾಡುತ್ತಿದ್ದೆನೊ ಅಲ್ಲಿಯ

ಬಳಕೆಯ ಭಾಷೆಯನ್ನೆ ಉಪಯೋಗಿಸುತ್ತಿದ್ದೆ. ಇದರಲ್ಲಿ ಒಂದೂ ತಪ್ಪು ಉಳಿಯಬಾರದೆಂದು ನನ್ನ ಹಟ. ಅದಕಾಗಿ ಅಲ್ಲಿಯ ಉಪನ್ಯಾಸವನ್ನು ಅಲ್ಲಿಯ ವಿದ್ವಾಂಸರಿಂದಲೆ ಬರೆಯಿಸಿಬಿಡುತ್ತಿದ್ದೆ! ಎಷ್ಟೆಂದರೂ ನಿಸ್ವಾರ್ಥ ನಾಗುವುದು ದರಿದ್ರನಾರಾಯಣನ ಸೇವಕನಿಗೆ ಅನಿವಾರ್ಯವಲ್ಲವೆ? ಎಷ್ಟೋ ಸಲ ಸಭೆಗೆ ಬಂದವರನ್ನು ನೋಡಿ ವಿಷಯವನ್ನ ಬದಲಾಯಿಸ ಬೇಕಾಗುತ್ತಿತ್ತು. ಅಂತಹ ಪ್ರಸಂಗಗಳಿಗಾಗಿ ಒಂದು ಸಾಮಾನ್ಯ ವಿಷಯ ವನ್ನು ಬೇರೆ ಬೇರೆ ಬಳಕೆಯ ಭಾಷೆಗಳಲ್ಲಿ ಬರೆಯಿಸಿಯೆ ಇಟ್ಟುಬಿಟ್ಟಿದ್ದೆ.

ಸಾಕು. ಆ ಕಷ್ಟನಷ್ಟಗಳ ವೈಭವವನ್ನು ಎಷ್ಟು ಬಣ್ಣಿಸಿದರೂ ಸಾಲದು. ಅದಕ್ಕೆಂದೇ ಅದನ್ನು ಆದಷ್ಟು ಬಣ್ಣಿಸುವುದಕ್ಕೆ ಇಬ್ಬರು [ಕನಿಷ್ಠ ಪಕ್ಷವಿದು] ಕಾರ್ಯದರ್ಶಿಗಳನ್ನಾದರೂ ಜೊತೆಯಲ್ಲಿ ತಿರುಗಾಡಿಸುತ್ತಿದ್ದೆ. ಇಬ್ಬರೂ ಒಂದೇ ವಿಷಯವನ್ನು ಬಣ್ಣಿಸಿ ತಮ್ಮ ಬುದ್ಧಿಯನ್ನೂ ವೇಳೆಯನ್ನೂ ಅಪವ್ಯಯಿಸಬಾರದೆಂದು ಒಬ್ಬನನ್ನು ಪ್ರಾಕ್-ಕಾರ್ಯದರ್ಶಿ ಎಂದೆ, ಇನ್ನೊಬ್ಬನನ್ನು ಪಶ್ಚಾತ್-ಕಾರ್ಯದರ್ಶಿ ಎಂದೆ. ನನ್ನಕಿಂತ ಮುಂಚೆ ಹೋಗಿ ಜನರಿಗೆ ನನ್ನ ಕಾರ್ಯದ ಮಹತ್ವ ಬಿಂಬಿಸುವಂತೆ ಸ್ವಾಗತ ಸತ್ಕಾರದ ಏರ್ಪಾಟನ್ನು ಮಾಡಿ ಅದನ್ನು ಇನ್ನೂ ಪರಿಣಾಮಕಾರಕವಾಗು ವಂತೆ ಬಣ್ಣಿಸುವುದು ಪ್ರಾಕ್-ಕಾರ್ಯದರ್ಶಿಯ ಕೆಲಸ ನಾನು ಹೇಳಿ ದ್ದನ್ನೆ ಹೇಳಿದರೂ ಅದನ್ನು ಹೊಸತೆನಿಸುವಂತೆ ಬಣ್ಣಿಸುವುದು ಪಶ್ಚಾತ್-ಕಾರ್ಯದರ್ಶಿಯ ಕೆಲಸ. ಇಂತಹ ವ್ಯವಸ್ಥೆ ಇದ್ದುದರಿಂದಲೆ ನನ್ನ 'ಪಾದಧೂಳಿ' ಎಂದು ನನ್ನ ಸಂಚಾರದ ಬಗ್ಗೆ ಹೇಳಿದೆ. ಇಂತಹ ವ್ಯವಸ್ಥೆ ಇದ್ದಿತೆಂದೇ ಅಂದು ಕರ್ನಾಟಕದಲ್ಲಿ ಏಕೀಕರಣದ ಪ್ರಚಾರವಾಯಿತು.

ಇದಾಯಿತು ಹಿಂದಿನ ಜನ್ಮದ ಕತೆ. ಆದರೆ ಇಂದು ಇನ್ನೂ ಏಕೀಕರಣದ ಆವಶ್ಯಕತೆ ಮತ್ತೆ ಪ್ರಾಪ್ತವಾಗಿದೆ ಎಂಬುದನ್ನು ನೋಡಿ, ಹಿಂದಿನ ಜನ್ಮದ ಕತೆಯನ್ನು ಕಂಡು ಸಾರ್ವಜನಿಕ ಜೀವನವನ್ನು ಹಂಬಲಿಸುತ್ತ ನನ್ನ ಕೈ ಕಿಸೆಗೆ ಧಾವಿಸುವುದು [ಉಪನ್ಯಾಸದ ಶೀಪಿ ಎಂದು]; ನನ್ನ ಕಂಠ ಉಬ್ಬುವುದು [ಪೂಮಾಲೆಯ ನೆನಹು ಎಂದು].



## ಶ್ರೀರಂಗ ಸಾರಸ್ವತ




ಮಾರಾಟದ ಅಧಿಕಾರಿಗಳು

**ಮನೋಹರ ಗ್ರಂಥ ಭಾಂಡಾರ, ಧಾರವಾಡ**